

# ಹಣತೆ

ಜುಲೈ - ಆಗಸ್ಟ್
2008
ಸಂಪುಟ 12
ಸಂಚಿಕೆ 1
ಖಾಸಗಿ ಪ್ರಸಾರಕ್ಕಾಗಿ ಮಾತ್ರ

## ಶಿವರಾಮ ಕಾರಂತ ವೇದಿಕೆಯ ಮುಖವಾಣಿ






'ಏಕಾದಶಿ ಉಪ್ವಾಸ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ: (ಎಡದಿಂದ ಬಲಕ್ಕೆ) ಶ್ರೀ ಶ್ರೀನಿವಾಸ ವೈದ್ಯ, ಶ್ರೀ ಶಿವಕುಮಾರ್, ಶ್ರೀಮತಿ ರಾಧಾ ರಾಮಸ್ವಾಮಿ ಮತ್ತು ಶ್ರೀ ಸಿ.ಆರ್. ಸತ್ಯ




'ಕಡಲತೀರದ ಭಾರ್ಗವ ಮತ್ತು ಇತರ ಕವನಗಳು' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ: (ಎಡದಿಂದ ಬಲಕ್ಕೆ) ಶ್ರೀ ಪಾ. ಚಂದ್ರಶೇಖರ ಚಡಗ, ಶ್ರೀಮತಿ ರಾಧಾ ರಾಮಸ್ವಾಮಿ, ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ ಮತ್ತು ಶ್ರೀಮತಿ ಶಾಂತಾಕುಮಾರಿ.



# ಹಣತೆ

ಶಿವರಾಮ ಕಾರಂತ ವೇದಿಕೆಯ ಮುಖಪತ್ರಿಕೆ

ಸಂಪುಟ: 12 ಜುಲೈ–ಸಪ್ಟೆಂಬರ್, 2008 ಸಂಚಿಕೆ: 1

# ಪ್ರಿಯ ಓದುಗ...

ದಿನಾಂಕ 29-6-2008ರಂದು ಬಿಡುಗಡೆಗೊಂಡ ನವ್ಯೋತ್ತರ ಯುಗದ ಮಹತ್ವದ ಕವಿ ಡಾ॥ ಎಚ್.ವೆಂಕಟೇಶಮೂರ್ತಿಯವರ **'ಉತ್ತರಾಯಣ ಮತ್ತು .......'** ಕವಿತಾ ಸಂಕಲನ ಅಮೇರಿಕೆಯಲ್ಲಿ ಮಗನ ಮನೆಯಲ್ಲಿ ಕುಳಿತು ಓದುತ್ತಾ ಮುದಗೊಂಡೆನು.

ದಿನಾಂಕ 18-7-2008ರಂದು ಶಿವರಾಮಕಾರಂತರ ವೇದಿಕೆ ಮತ್ತು ತರಳಬಾಳು ಕೇಂದ್ರಗಳ ಸಂಯುಕ್ತ ಆಶ್ರಯದಲ್ಲಿ ಬಿಡುಗಡೆಗೊಂಡ ನನ್ನ ನಾಲ್ಕನೆಯ ಕವನಸಂಗ್ರಹ **'ಕಡಲತೀರದ ಭಾರ್ಗವ ಮತ್ತು ಇತರ ಕವನಗಳು...'** ಬಿಡುಗಡೆಯ ಸಂದರ್ಭದಲ್ಲಿ ಎಚ್‌ಎಸ್ವಿಯವರನ್ನು ನಾನು ಪದೇ ಪದೇ ನೆನಪಿಸಿಕೊಂಡೆನು. ನನ್ನ ಎರಡನೆಯ ಸಂಕಲನ **'ಗಾಂಧಿ ಜಯಂತಿ'**ಯ ಹಸ್ತಪ್ರತಿಯನ್ನು ಅವರಿಗೆ ತೋರಿಸಿ ನನ್ನನ್ನು ಸದಾ ಕಾಡುತ್ತಿರುವ ಕೀಳರಿಮೆಯನ್ನು ಅವರಲ್ಲಿ ತೋಡಿಕೊಂಡಾಗ ಅವರೆಂದರು – "ಜಗತ್ತಿನಲ್ಲಿ ಅತಿ ಎತ್ತರದ ಮೌಂಟ್ ಎವರೆಸ್ಟ್ ಪರ್ವತವಿದ್ದಂತೆ ನಮ್ಮೂರಿನಲ್ಲಿರುವ ಚಿಕ್ಕ ಗುಡ್ಡಕ್ಕೂ ತನ್ನದೇ ಆಗ ಮಹತ್ವವಿದೆ. ಹೆತ್ತವನಿಗೆ ಹೆಗ್ಗಣ ಮುದ್ದು" ಎಂದು ಹೇಳಿದರಲ್ಲದೆ ಕವನಕ್ಕೆ ವಸ್ತುನಿಷ್ಠವಾದ ಮುನ್ನುಡಿಯನ್ನು ಬರೆದುಕೊಟ್ಟರು. ನನ್ನ ಮೂರನೆಯ ಕವನ ಸಂಕಲನವನ್ನು ಪ್ರಕಟಿಸಿದ ಸಪ್ನಾ ಬುಕ್ ಹೌಸ್‌ನವರು 15-6-2008ರಂದು ಶಿವರಾಮಕಾರಂತ ವೇದಿಕೆಯ ಸಹಕಾರದೊಂದಿಗೆ ಬಿಡುಗಡೆ ಮಾಡಿದಾಗ ಡಾ॥ ಸಾ.ಶಿ. ಮರುಳಯ್ಯ ಕವನವನ್ನು ಮೆಚ್ಚಿ ಮಾತನಾಡಿದ್ದರು. ಈ ಮೂರು ಕವನ ಸಂಕಲನಗಳಿಂದ ಕೆಲ ಕೆಲವು ಕವನಗಳನ್ನು ಆಯ್ದು **'ಕಡಲತೀರದ ಭಾರ್ಗವ ಮತ್ತು ಇತರ ಕವನಗಳು'** ಕೃತಿ ನನ್ನ ಗೆಳೆಯ ಬಿ.ವಿ. ಕೆದಿಲಾಯರ ಪ್ರೇರಣೆ ಹಾಗೂ ರವಿ ಪ್ರಕಾಶನದ ಗೆಳೆಯ ಎಸ್.ಆರ್. ಸತ್ಯನಾರಾಯಣ ಅವರ ಸಹಕಾರದಿಂದ ಹೊರಬಂದಿದೆ.

ಒಂದುಕಾಲದಲ್ಲಿ ಮಲ್ಲಾಡಿಹಳ್ಳಿಯಲ್ಲಿ ಕ್ರಾಫ್ಟ್ ಪಾಠ ಮಾಡುತ್ತಿದ್ದ ಶ್ರೀ ವೆಂಕಟೇಶಮೂರ್ತಿಯವರು ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರ ಪ್ರೇರಣೆಯಿಂದ ಬೆಂಗಳೂರಿಗೆ ಬಂದು ಕನ್ನಡ ಎಂ.ಎ. ಪದವಿ ಪಡೆದು ಅದೆಂತಹ ಎತ್ತರಕ್ಕೆ ಬೆಳೆದಿದ್ದಾರೆ! ನಾನೂ ನಮ್ಮೂರ ಹೈಸ್ಕೂಲೊಂದರಲ್ಲಿ ಕ್ರಾಫ್ಟ್ ಶಿಕ್ಷಕನ ಹುದ್ದೆಗೆ ಅರ್ಜಿ ಸಲ್ಲಿಸಿದಾಗ, ಆ ಅರ್ಜಿ ಪುರಸ್ಕೃತವಾಗದೆ ಮುಂದೆ ಆದಾಯಕರ ಇಲಾಖೆಯಲ್ಲಿ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಯಶಸ್ವಿಯಾಗಿ, ಇನ್ಸ್‌ಪೆಕ್ಟರ್‌ನಾಗಿ ಸೇರಿ, ಹಂತಹಂತವಾಗಿ ಮೇಲೇರಿ ಆದಾಯಕರದ ಆಯುಕ್ತನಾಗಿ ನಿವೃತ್ತನಾಗಿ, ಈಗ ಐದು ವರ್ಷಗಳೇ ಕಳೆಯುತ್ತಾ ಬಂದಿವೆ. ಸಾಮಾಜಿಕ ಮನ್ನಣೆ, ಆರ್ಥಿಕ ಭದ್ರತೆಗಳ

ದೃಷ್ಟಿಯಿಂದ ಕೇಂದ್ರ ಸರ್ಕಾರದ ಈ ಹುದ್ದೆ ಶಾಲಾ ಮೇಷ್ಟ್ರ ಪದವಿಗಿಂತ ಕಡಿಮೆ ಇಲ್ಲ ಎನಿಸಿದ್ದರೂ, ಬಾಲ್ಯದಿಂದಲೇ ಕಾಡುತ್ತಿದ್ದ ಕಾವ್ಯ ರಚನೆಯ ಹುದ್ದೆಗೆ ಪ್ರೇರಕವಾದ ವಾತಾವರಣ ಅಲ್ಲಿ ಇರಲಿಲ್ಲವೆನ್ನಬೇಕು. ಬದುಕನ್ನು ಒಂದು ನದಿಗೆ ಹೋಲಿಸಬಹುದು. ಎಲ್ಲಿಯೋ ಒಂದು ಸಣ್ಣ ತೊರೆಯಾಗಿ ಹುಟ್ಟಿ, ಹತ್ತಾರು ಕಿರುತೊರೆಗಳನ್ನು ಸೇರಿ, ವಿಶಾಲವಾದ ನದಿಯಾಗಿ ಸಮುದ್ರವನ್ನು ಸೇರುವಾಗ ಆ ನದಿ ಅತ್ಯಂತ ಮಹತ್ವಪೂರ್ಣವಾಗಿ ಒಂದು ನಾಡಿನ ಜೀವನಾಡಿಯೂ ಆಗಬಲ್ಲದು. ಕೆಲವು ನದಿಗಳು ಆಗಾಗ್ಗೆ ತಮ್ಮ ಪಥವನ್ನು ಬದಲಿಸಬಹುದು. ಇನ್ನು ಕೆಲವು ಸರಸ್ವತೀ ನದಿಯಂತೆ ಇಂಗಿ ಗುಪ್ತಗಾಮಿನಿಯೂ ಆಗಬಹುದು. ಎಚ್‌ಎಸ್ವಿಯವರು ವಯಸ್ಸಿನಲ್ಲಿ ಒಂದು ವರ್ಷ ಚಿಕ್ಕವರಾದರೂ ನನಗೆ ಗುರು ಸಮಾನರು. ಕನ್ನಡ ಸಾಹಿತ್ಯಕ್ಕೆ ಅವರ ಕಾಣಿಕೆ ಮತ್ತು ಕಾಣ್ಕೆ ಎರಡೂ ಹಿರಿದು. 'ಉತ್ತರಾಯಣ'ಕ್ಕೆ ಅವರು ಬರೆದ ಮುನ್ನುಡಿ, ಡಾ॥ ಚಿಂತಾಮಣಿ ಕೊಡ್ಲೆಕೆರೆಯವರ ಹಾಗೂ ಡಾ. ಯು.ಆರ್.ಅನಂತಮೂರ್ತಿಯವರ ಬೆನ್ನುಡಿ ಎಲ್ಲವನ್ನೂ ಓದಿದಾಗ ಕನ್ನಡಕ್ಕೆ ಅವರ ಕೊಡುಗೆ ಎಷ್ಟು ಹಿರಿದು ಎಂದು ಅರ್ಥವಾಗುತ್ತದೆ. ನಮ್ಮ ಮುಂದಿನ ಸಂಚಿಕೆಗೆ ಅವರ ಕುರಿತು ಲೇಖನಗಳನ್ನು ಆಹ್ವಾನಿಸುತ್ತಿದ್ದೇವೆ. ಪ್ರಕಟಿತ ಬರಹಗಳಿಗೆ ಸಂಭಾವನೆಯೂ ಉಂಟು.

ಈ ಸಂಚಿಕೆಯಲ್ಲಿ ಕನ್ನಡದ ಹಿರಿಯ ಕವಿ ಡಾ॥ ಸುಮತೀಂದ್ರ ನಾಡಿಗರ ಕುರಿತು ಕೆಲವು ಲೇಖನಗಳೂ, ನನ್ನ ಒಂದು ಕವನವೂ ಸೇರ್ಪಡೆಗೊಂಡಿವೆ. ಶಿವರಾಮಕಾರಂತ ವೇದಿಕೆಯೊಂದಿಗೆ ನಿರಂತರ ಸಂಪರ್ಕವನ್ನು ಇಟ್ಟುಕೊಂಡ ಕನ್ನಡದ ಈ ಪ್ರಮುಖ ಕವಿ, ವಿಮರ್ಶಕ ನಿಗರ್ವಿಗಳೂ ಸ್ನೇಹಪರರೂ ಆಗಿದ್ದು, ನಮ್ಮ ಚಟುವಟಿಕೆಗಳಿಗೆ ಸಹಕಾರ ನೀಡುತ್ತಾ ಬಂದಿದ್ದಾರೆ.

ಮಕ್ಕಳಿಗೆ ಪ್ರಾಥಮಿಕ ಹಂತದಲ್ಲಿ ಕನ್ನಡದಲ್ಲಿಯೇ ಶಿಕ್ಷಣ ಕೊಡಬೇಕು ಎನ್ನುವ ಬೇಡಿಕೆಯನ್ನು ತಳ್ಳಿಹಾಕಿದ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪಿನಿಂದ ತಲ್ಲಣಗೊಂಡ ಕನ್ನಡ ಪ್ರೇಮಿಗಳು ಎಚ್‌ಎಸ್ವಿಯವರ ಈ ಮಾತುಗಳನ್ನು ಗಮನಿಸಬೇಕು...

"ನಾವುಗಳೆಲ್ಲ ಮೂಲಭೂತ ನೆಲೆಯಲ್ಲಿ ಒಂಟಿಗಳು ಎಂಬುದನ್ನು ಎಷ್ಟೇ ಕಟುಸತ್ಯವಾದರೂ ಒಪ್ಪಿಕೊಳ್ಳದೆ ವಿಧಿಯಿಲ್ಲ. ಯಾವನೇ ಜೀವಿ ಜಗತ್ತಲ್ಲಿ ಹುಟ್ಟಿದ್ದು ಒಂಟಿಯಾಗಿ. ಜಗತ್ತನ್ನು ಬಿಡಬೇಕಾದ್ದು ಒಂಟಿಯಾಗಿ. ಈ ಎರಡು ಧ್ರುವಗಳ ನಡುವೆ ನಿರಂತರವಾಗಿ ನಡೆಯುವಂಥದ್ದು ಬಿಡಿಬಿಡಿಗಳನ್ನೂ ಸೂತ್ರೀಕರಿಸುವ ಸಾಮಾಜಿಕ, ಸಾಂಸ್ಕೃತಿಕ ಯತ್ನಗಳು, ಗಂಡು-ಹೆಣ್ಣು, ಗಂಡ-ಹೆಂಡತಿ ಆಗುವಲ್ಲಿ ದ್ವೈತಗಳನ್ನೂ ಅದ್ವೈತಗೊಳಿಸುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಹುನ್ನಾರವಿದೆ. ಹೀಗೆ ಎರಡು ಒಂದಾಗುವುದಕ್ಕೆ ಅದಮ್ಯ ಸಾಂಕೇತಿಕ ಉಪಾಯಗಳಿವೆ- ಒಂದು

ಬೀದಿಯವರು ಎಂದು, ಒಂದು ಹಳ್ಳಿಯವರು ಎಂದು, ಒಂದು ದೇಶದವರು ಎಂದು, ಒಂದು ಧರ್ಮದವರು ಎಂದು, ಒಂದು ಭಾಷೆಯವರು ಎಂದು ಈ ಎಲ್ಲಾ ಅಂಟುಗಳನ್ನೂ ನಾವು ನಿರ್ಮಿಸಿಕೊಂಡಿರುವುದು ಅಷ್ಟೆ. ಭಾಷೆ, ದೇಶ, ಧರ್ಮ ಯಾವುದೂ ಸಹಜವಲ್ಲ. ಇವು ಸಾಮಾಜಿಕ ಅಗತ್ಯದ ನಿರ್ಮಾಣಗಳು ಮತ್ತು ಈ ಗುಂಪುಗಳಲ್ಲಿ ಪಕ್ಷಾಂತರಗಳು ಆಗಬಾರದು ಎಂದಿಲ್ಲ. ನಮ್ಮ ಹುಡುಗರು ಅನೇಕರು ಹಸಿರು ಚೀಟಿ ಪಡೆದು ನಿರುದ್ವಿಗ್ನವಾಗಿ ಅಮೇರಿಕನ್ನರಾಗುವುದಿಲ್ಲವೇ? ಒಂದು ಧರ್ಮದವರು ಏನೇನೋ ಕಾರಣಕೊಟ್ಟು ಧರ್ಮವನ್ನು ಬಿಟ್ಟುಕೊಟ್ಟು ಮತ್ತೊಂದಕ್ಕೆ ವಲಸೆ ಹೋಗುವುದಿಲ್ಲವೇ? ಆರ್ಥಿಕ ಮತ್ತು ಸಾಮಾಜಿಕ ಪ್ರತಿಷ್ಠೆಯಾಗಿ ನಮ್ಮಲ್ಲಿ ಎಷ್ಟು ಜನ ಭಾಷಾಂತರ (ಮತಾಂತರ ಎನ್ನುವಂತೆ) ಗೊಳ್ಳುವುದಿಲ್ಲ? ಕನ್ನಡ ನಮ್ಮನ್ನು ಒಂದಾಗಿಸುತ್ತದೆ ಎನ್ನುವುದು ಒಂದು ಗ್ರಹೀತ ಕಲ್ಪನೆ. ಆದರೆ ಎಷ್ಟೋ ಮಂದಿ ಕನ್ನಡಿಗರು ಆಂಗ್ಲೀಕೃತಗೊಂಡು ಪರಭಾಷಿಗಳಾಗುವುದಿಲ್ಲವೆ? ದಾಂಪತ್ಯ ನಮ್ಮನ್ನು ಒಕ್ಕಟ್ಟಿನಲ್ಲಿ ಹಿಡಿದಿಡುವುದೇ? ಹಾಗಾದರೆ ನಿತ್ಯ ನಿತ್ಯ ಸಂಭವಿಸುತ್ತಿರುವ ವಿವಾಹ ವಿಚ್ಛೇದನಗಳು ಏನನ್ನು ಕಥಿಸುತ್ತವೆ? ಬದುಕು ಕೇವಲ ಲಾಭ ನಷ್ಟಗಳ ಸಮೀಕರಣವಾದಾಗ ಯಾವ ತತ್ವವೂ ನಮ್ಮನ್ನು ಒಕ್ಕಟ್ಟಿನಲ್ಲಿ ಹಿಡಿದಿರಲಾರದು. ಎಲ್ಲಿ ಲಾಭವುಂಟೋ ಅಲ್ಲಿಗೆ ವ್ಯಕ್ತಿಗಳು ಮೂಲನೆಲೆಯನ್ನು ತೊರೆದು ಜಾರಿಕೊಳ್ಳುತ್ತಾರೆ. ರಾಜಕಾರಣದಲ್ಲಿ ಕಾಣುವ ಪಕ್ಷಾಂತರ ಪಿಡುಗುಗಳು ಈ ಜಾರುವಿಕೆಯನ್ನು ಬಹಳ ಸಮರ್ಥವಾಗಿ ಪ್ರತಿನಿಧಿಸಬಲ್ಲವು. ಹಾಗಾದರೆ ನಮ್ಮನ್ನು ಒಟ್ಟಿಗೇ ಹಿಡಿದಿರುವ ಅಂಟು ಯಾವುದು? ಇದೇ ಅಂಟಿನ ಜಿಹಾಸೆ. 'ನನಗೂ ನಿನಗೂ ಅಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ...' ನಾವು ಅದಕ್ಕಾಗಿಯೇ ಭಾಷೆ, ದೇಶ, ಸಂಸಾರ ಎಂದು ಹೊಡೆದಾಡುತ್ತಿದ್ದೇವೆ."

ಈಹಿಂದೆ ಬರೆದಿರುವಂತೆ ಶಿವರಾಮಕಾರಂತರಿಗೆ ಕನ್ನಡದ ಕುರಿತು ಇದ್ದದ್ದು ನಿಜವಾದ ಕಾಳಜಿ. ಕನ್ನಡವನ್ನು ಬೆಳೆಸುವ ಕಾಯಕದಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡಂತೆ ಬೇರೆ ಎಷ್ಟು ಜನ ತೊಡಗಿಕೊಂಡಿದ್ದಾರೆ? ದೂರದ ಅಮೇರಿಕದ ಶಿಕಾಗೋದಲ್ಲಿ ವಿಶ್ವ ಕನ್ನಡ ಸಮ್ಮೇಳನದಲ್ಲಿ ಭಾಗವಹಿಸಿ ನಾನು ಭಾರತಕ್ಕೆ ಮರಳುವಾಗ ಕಾರಂತರ 107ನೆಯ ಜನ್ಮದಿನವನ್ನು ಆಚರಿಸಲು ಕೆಲವೇ ದಿನಗಳಿರುತ್ತವೆ. ಅಲ್ಲಿಯವರೆಗೆ ಶಿವರಾಮಕಾಂತ ವೇದಿಕೆಯ ಸೂತ್ರವನ್ನೂ ಸಮರ್ಥವಾಗಿ ನಡೆಸಿಕೊಂಡು ಹೋಗುವ ಎಲ್ಲ ಮಿತ್ರರಿಗೂ ನನ್ನ ವಂದನೆಗಳು.

ಇಂತು

**ಪ್ರಾ. ಚಂದ್ರಶೇಖರ ಚಡಗ**
**ವ್ಯವಸ್ಥಾಪಕ ಸಂಪಾದಕ**

# 1. ಎಲ್ಲಿ ಹೋದವೇ ಆ ದಿನ

ಎಲ್ಲಿ ಹೋದವೇ ಆ ದಿನ?
ಸಖಿ ಮತ್ತೆ ಬರುವವೆ ಆ ದಿನ?

ಮುಗಿಲ ಮೇಲೆ ನಡೆದಾಡಿದ ದಿನ
ಬಿಸಿಲು ಸುಡದ ದಿನ, ಚಳಿ ತಾಗದ ದಿನ
ನೆಲಬಾನಿನ ಮಳೆಬಿಲ್ಲ ಗೆಳೆತನ
ನನ್ನ ನಿನ್ನತನ ಕಳೆದ ತತ್‌ಕ್ಷಣವೆ
ನಾವು ಎನ್ನುವುದು ಕಲಿಸಿದಂಥ ದಿನ
ಎಲ್ಲಿ ಹೋದವೇ ಆ ದಿನ?

ಕಾರಣವಿಲ್ಲದೆ ನಗುತಲಿದ್ದ ದಿನ
ಲಜ್ಜೆ ಮೈಮರೆತು ಬೆವೆತುಹೋದ ದಿನ
ಪ್ರೀತಿಯ ದೀಪವು ಹೊತ್ತಿಕೊಂಡ ದಿನ
ಚಳಿಯ ಸವತಿಯೊಲು ನೀ ಕಂಡ ದಿನ
ಕಾಲ ದೇಶಗಳು ಮರೆತು ಹೋದ ದಿನ
ಎಲ್ಲಿ ಹೋದವೇ ಆ ದಿನ?

ನರಗಳ ಬಿಗಿತಕೆ ಮುಲುಕಾಡಿದ ದಿನ
ಸುಗ್ಗಿ ಮೈಯೊಳಗೆ ನುಗ್ಗಿ ಬಂದ ದಿನ
ಸುಖಕ್ಕೂ ನೋವಿಗೂ ಸಖ್ಯವಾದ ದಿನ
ಎಲ್ಲಿ ಹೋದವೇ ಆ ದಿನ?

ದುಂದುಗಾರಿಕೆಯ ದಿನ, ಉತ್ಪ್ರೇಕ್ಷೆಯ ದಿನ
ಶ್ರೀಮಂತಿಕೆಯನು ಸೂರಾಡಿದ ದಿನ
ಕಾಮನಬಿಲ್ಲಿನ ಡುಬ್ಬವನೇರಿ
ಮುಗಿಲ ಬಣ್ಣಗಳ ಹೋಳಿಯನಾಡಿ
ಜಾಗ್ರತ ಸುಪ್ತ ಸುಷುಪ್ತಿಯ ಆಚೆಗೆ
ಅರಿವಿನ ಮೇರೆಯ ದಾಟಿಹೋದ ದಿನ
ಎಲ್ಲಿ ಹೋದರೂ ಆ ದಿನ
ಸಖಿ, ಮತ್ತೆ ಬರುವವೇ ಆ ದಿನ !

# 2. ರಾಷ್ಟ್ರವಾಳುವ ಮಂದಿ

ರಾಷ್ಟ್ರವಾಳುವ ಮಂದಿ ನಾವೆ ಆರಿಸಿದವರು
ನಾಡ ಬೆಳಸುವರೆಂದು ನಂಬಿದ್ದೆ ತಪ್ಪು.
ಅಧಿಕಾರ ಮೂಳೆತುಂಡಿನ ಸುತ್ತ ಇವರ ಕಚ್ಚಾಟ
ಯಾರು ಕಾಸೆಸೆಯುವರೊ ಅವರ ಮೂಸುವರು

ಇದು ಜಾತಿನಾಯೆಂದು ಪಲ್ಲಕ್ಕಿಯಲ್ಲಿಟ್ಟು
ಮೆರವಣಿಗೆ ಮಾಡಿದೆವು. ಕುಳಿತದ್ದು ಸ್ವಲ್ಪ ಕಾಲ.
ಜರಡಿಯಲ್ಲೆಷ್ಟು ಕ್ಷಣ ನೀರನ್ನು ಹಿಡಿದೇವು
ನೆಟ್ಟಗಿರಿಸುವುದುಂಟೆ ನಾಯಿ ಬಾಲ?

ಅವರಿವರ ಬೈದು ಫಲವೇನಿಲ್ಲ; ಇವರಿಗಧಿಕಾರಗಳ
ಕೊಟ್ಟರೆ ನಾವು, ಕೋತಿಯ ಕೈಗೆ ಮಾಣಿಕ್ಯ;
ಚೆಲ್ಲಾಪಿಲ್ಲಿ ಎಸೆದೀಗ ಹಲ್ಲು ಕಿರಿಯುತ್ತಾವೆ, ಹೇನು ಹೆಕ್ಕುತ್ತಾವೆ
ಎಳೆಸಸಿಯ ಕೀಳುತ್ತಾವೆ; ಏನಾಯಿತೀಗ ಸಾರ್ಥಕ?

ನಾಳಿನ ಯೋಚನೆಯೆ ಇವಕ್ಕೆ? ತಮ್ಮ ಬಗ್ಗೆ ಗುಡ್ಡದಷ್ಟು;
ನಮ್ಮನಿಮ್ಮಂಥವರ ಮರೆತಿದ್ದಾವೆ ಅಷ್ಟೆ.
ಕೊಂಬೆಯಿಂದೊಂದು ಕೊಂಬೆಗೊಂದೊಂದು ಜಿಗಿದಂತೆ
ಗುಂಪಿಂದ ಗುಂಪು ಇನ್ನೊಂದಕ್ಕೆ ಜಿಗಿಯುವುದೆ ಚೇಷ್ಟೆ.

ರಾಷ್ಟ್ರವಾಳುವ ಮಂದಿ ನಾವು ಆರಿಸಿದವರು
ನಾಡ ಬೆಳೆಸುವರೆಂದು ನಂಬಿದ್ದೆ ತಪ್ಪು;
ಬಡತನವನಳಿಸುವರಂತೆ, ಇವರು ಅಳಿಸುತ್ತಾರೆ ಬಡವರನ್ನು
ನಮಗೆ ಕತ್ತಲೆಯಲ್ಲಿ ದೀಪಕ್ಕೆ ಗತಿಯಿಲ್ಲ, ಇವರಿಗೋ ಬಲ್ಬುಗಳ ಹಗಲು

(1979ರಲ್ಲಿ ಬರೆದ ಕವನ)

ಒತ್ತಿ ಒತ್ತಿ ಹಣ್ಣುಮಾಡಿದರೆ ಎತ್ತಣ ರುಚಿಯಯ್ಯಾ?

– ಅಲ್ಲಮಪ್ರಭು

# ಮಹತ್ವದ ಕವಿ, ದಿಟ್ಟ ವಿಮರ್ಶಕ ಡಾ. ಸುಮತೀಂದ್ರ ನಾಡಿಗ

✍... ಬಿ.ವಿ. ಕೆದಿಲಾಯ

ಡಾ. ಸುಮತೀಂದ್ರ ನಾಡಿಗರು ಇಂದು ನಮ್ಮೊಡನಿರುವ ಓರ್ವ ಮಹತ್ವದ ಕವಿ, ಬಹುಶ್ರುತ ವಿದ್ವಾಂಸ ಮತ್ತು ದಿಟ್ಟ ವಸ್ತುನಿಷ್ಠ ವಿಮರ್ಶಕರು. ಉತ್ತಮ ಭಾಷಣಕಾರರು. ತನ್ನ ಮತ್ತು ಇತರ ಕವಿಗಳ ಕಾವ್ಯಗಳನ್ನು ಮೋಡಿ ಮಾಡುವಂತೆ ವಾಚನ ಮಾಡುವ ವಿಶಿಷ್ಟ ಪ್ರತಿಭಾವಂತರು.

ಕಳೆದ ಐವತ್ತು ವರ್ಷಗಳಿಂದ ಅವರು ಸತ್ವಪೂರ್ಣವೂ, ವೈವಿಧ್ಯಮಯವೂ, ವಿಪುಲವೂ ಆದ ಕೃತಿಗಳ ಮುಖಾಂತರ ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೊಡುಗೆ ನೀಡಿದ್ದಾರೆ. ಪದ್ಯ-ಗದ್ಯ ಎರಡರಲ್ಲೂ ನಾಡಿಗರು ಗಟ್ಟಿಗರು. ನವ್ಯ, ನವ್ಯೋತ್ತರ - ಈ ಎರಡೂ ಕಾಲಘಟ್ಟಗಳಲ್ಲಿ ನಿರಂತರ ಪ್ರಯೋಗಶೀಲರಾಗಿ ಬರೆಯುತ್ತಾ, ಬೆಳೆಯುತ್ತಾ, ಮಾಗುತ್ತಾ, ಕಾವ್ಯಕ್ಕೆ ಹೊಸ ಆಯಾಮಗಳನ್ನು ಸೇರಿಸುತ್ತಾ ಓದುಗರಿಗೆ ಅಚ್ಚರಿ ಹುಟ್ಟಿಸುತ್ತಿರುವವರು. ಅವರ ಓರಗೆಯ ಬಹುತೇಕ ಕವಿಗಳು ನವ್ಯದಿಂದ ತೊಡಗಿ, ಬಂಡಾಯ, ದಲಿತ ಇತ್ಯಾದಿ ನವ್ಯೋತ್ತರದ ಕಡೆ ಸಾಗಿದರೆ, ನಾಡಿಗರು ನವ್ಯದಿಂದ ಆರಂಭಿಸಿ, ಭಾವಗೀತೆಗೆ ಮರಳಿ, ಆರ್ಷಕಾವ್ಯ ಕ್ಷೇತ್ರಕ್ಕೆ ಧುಮುಕುವ ಪ್ರಯೋಗಶೀಲತೆಯನ್ನು ತೋರಿದ್ದಾರೆ. ಅನಿರೀಕ್ಷಿತ ಸ್ವರೂಪದ ಗದ್ಯ-ಪದ್ಯಗಳಿಂದ ಸಾಹಿತ್ಯಪ್ರಿಯರ ಕುತೂಹಲವನ್ನು ಕೆರಳಿಸುತ್ತಲೇ ಇದ್ದಾರೆ.

## ಬೇಂದ್ರೆ-ಅಡಿಗರ ದೃಷ್ಟಿ:

**"ಬೇಂದ್ರೆ, ಅಡಿಗರ ದೃಷ್ಟಿ ಕೃಪೆಯಿಂದ ನಡೆಸುತಿದೆ ಈನನ್ನ ಕಾವ್ಯಸೃಷ್ಟಿ"** (ದಾಂಪತ್ಯಗೀತ) ಎಂದು ಪ್ರಾಂಜಲವಾಗಿ ಹೇಳಿರುವ ನಾಡಿಗರು ಮೊದಲು ಪ್ರಭಾವಿತರಾದದ್ದು ಅಡಿಗರಿಂದ. ಅಡಿಗರ ಶಿಷ್ಯರಾಗಿ, ಆಪ್ತರಾಗಿ, ಅವರ ಮೆಚ್ಚಿಗೆ, ವಿಮರ್ಶೆ, ಮಾರ್ಗದರ್ಶನಗಳಲ್ಲೇ ಅವರ ಕಾವ್ಯ ರೂಪು ತಳೆಯಿತು. ಅನಂತರ ಅವರು ಬೇಂದ್ರೆ ಕಾವ್ಯದ ಸಮಗ್ರ ಅಧ್ಯಯನ ಮಾಡಿ ಡಾಕ್ಟರೇಟ್ ಪಡೆದುಕೊಂಡರು. ಈ ಇಬ್ಬರು ಶ್ರೇಷ್ಠ ಕವಿಗಳ ಕಾವ್ಯವನ್ನು ಜೀರ್ಣಿಸಿಕೊಂಡು ಕ್ರಮೇಣ ತನ್ನದೇ ಆದ ನೆಲೆಯನ್ನು ಕಂಡುಕೊಂಡರು. ವೈವಿಧ್ಯಮಯ ಕೃತಿಗಳನ್ನು ರಚಿಸುತ್ತಾ, ಅನೇಕ ಹಂತಗಳನ್ನು ದಾಟಿ, **'ದಾಂಪತ್ಯಗೀತ'** ಮತ್ತು **'ಪಂಚಭೂತಗಳು'** ಎಂಬ ಶ್ರೇಷ್ಠ ದೀರ್ಘಕವನಗಳನ್ನು ರಚಿಸಿ, ಒಂದು ಎತ್ತರದ ಶಿಖರವನ್ನೇರಿದ್ದಾರೆ. ಆದರೆ ಅವರ ಕಾವ್ಯಯಾತ್ರೆ ನಿಂತಿಲ್ಲ, ನಿಸ್ತೇಜವಾಗಿಲ್ಲ. ಅವರು ಎಪ್ಪತ್ತಮೂರು ದಾಟಿದರೂ ಹೊಸ ಎತ್ತರವನ್ನೇರುವ ಉತ್ಸಾಹದಲ್ಲಿದ್ದಾರೆ.

ಕಾವ್ಯದ ಬಗ್ಗೆ ಸಾಹಿತ್ಯಲೋಕದ ಅನೇಕ ಗಣ್ಯರು ಒಳ್ಳೆಯ ಮಾತುಗಳನ್ನು ಹೇಳಿದ್ದಿದೆ. ಪುತಿನ, ಅಡಿಗ, ಅನಂತಮೂರ್ತಿ, ಆಮೂರ ಮುಂತಾದ ಹಿರಿಯರಿಂದ ಹಿಡಿದು ಹೊಸ ತಲೆಮಾರಿನ ಮಲ್ಲೇಪುರಂ, ಜೆ.ಬಿ. ಹರೀಶರವರೆಗೆ ವಿಮರ್ಶಕರು ಅವರ ಕೃತಿಗಳ ಸತ್ವವನ್ನು ಗುರುತಿಸಿದ್ದಾರೆ. ಅವರ 'ದಾಂಪತ್ಯಗೀತ' ಹನ್ನೆರಡು ಭಾರತೀಯ ಭಾಷೆಗಳಿಗೆ ಅನುವಾದವಾಗಿದೆ. ಅಂಥ ಆತ್ಮ ನಿವೇದನಾ ಕಾರ್ಯ (confessional poem) ಕನ್ನಡದಲ್ಲಿ ಬೇರೆ ಇಲ್ಲ ಎಂದ ವಿಮರ್ಶಕರೂ ಉಂಟು. ನಾಡಿಗರ ಕಾವ್ಯ ಪ್ರತಿಭೆಗೆ **'ಎಲ್ಲಿ ಹೋದವೋ ಆದಿನ'** ದಂಥ ಕವನಕ್ಕಿಂತ ಬೇರೆ ಸಾಕ್ಷಿ ಬೇಕಿಲ್ಲ. ಆದಾಗ್ಯೂ ಅವರಿಗೆ ಸಾಹಿತ್ಯಲೋಕದಿಂದ ಸಲ್ಲಿಸಬೇಕಾದಷ್ಟು ಗೌರವಗಳು ಸಂದಿಲ್ಲ. ಅಕಾಡೆಮಿಗಳು ಅವರ ಕಾವ್ಯದ ಸತ್ವವನ್ನು ಗುರುತಿಸಿಲ್ಲ. ಬಹುಶಃ ಉತ್ತಮ ಕಾವ್ಯ ರಚಿಸಿಯೂ ದೊಡ್ಡ ಕವಿಯ ಘನಗಾಂಭೀರ್ಯ ತೋರದ, ಒಮ್ಮೊಮ್ಮೆ ಮುಗ್ಧ ಮಗುವಿನಂತೆ, ಒಮ್ಮೊಮ್ಮೆ ತುಂಟ ಹುಡುಗನಂತೆ, ಒಮ್ಮೊಮ್ಮೆ ವಿದಗ್ಧ ವಿಮರ್ಶಕನಂತೆ, ಮಗುದೊಮ್ಮೆ ವ್ಯಂಗ್ಯೋಕ್ತಿ ಚತುರನಂತೆ ಕಾಣುವ ಅವರ ಸಂಕೀರ್ಣ Maverick ವ್ಯಕ್ತಿತ್ವವೂ ಈ ಅವಜ್ಞೆಗೆ ಕಾರಣವೋ ಏನೋ. ಅದೇನೇ ಇರಲಿ, ನಾಡಿಗರು ಶಕ್ತಿಶಾಲಿ ಕವಿ ಎನ್ನುವುದು ನಿರಾಕರಿಸಲಾಗದ ವಾಸ್ತವ.

## ವೈಪುಲ್ಯ, ವೈವಿಧ್ಯ:

ಎಂಟು ಕವನ ಸಂಕಲನಗಳನ್ನೂ ಮೂರು ಕಥಾಸಂಕಲನಗಳನ್ನೂ ಮೂರು ನಾಟಕಗಳನ್ನೂ ಎಂಟು ಗದ್ಯ ಗ್ರಂಥಗಳನ್ನೂ ಎಂಟು ಶಿಶುಸಾಹಿತ್ಯ ಕೃತಿಗಳನ್ನೂ ರಚಿಸಿರುವ ನಾಡಿಗರು ಅನುವಾದದಲ್ಲಿಯೂ ನಿಪುಣರು. ಕನ್ನಡದಿಂದ ಇಂಗ್ಲೀಷಿಗೆ, ಇಂಗ್ಲೀಷಿನಿಂದ ಕನ್ನಡಕ್ಕೆ, ಬಂಗಾಲಿಯಿಂದ ಇಂಗ್ಲೀಷಿಗೆ – ಹೀಗೆ ವೈವಿಧ್ಯಮಯವಾದ 19 ಅನುವಾದ ಗ್ರಂಥಗಳನ್ನು ನೀಡಿದ್ದಾರೆ. ಇವೆಲ್ಲ ಅವರ ತೀವ್ರ ಸಾಹಿತ್ಯನಿಷ್ಠೆಯ ಅಭಿವ್ಯಕ್ತಿಗಳಾಗಿವೆಯೇ ಹೊರತು ಸಾಹಿತ್ಯದ careerist ನ ವರಸೆಗಳಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಹಿರಿಯ ಸಾಹಿತಿಗಳಲ್ಲಿ ಅನ್ಯ ಕವಿ–ಸಾಹಿತಿಗಳ ಕೃತಿಗಳ ಬಗ್ಗೆ ನಾಡಿಗರಂತೆ ತೀವ್ರ ಆಸಕ್ತಿವಹಿಸಿ, ಓದುವವರು, ಮಾತಾಡುವವರು ಬಹುಶಃ ಬೇರೆ ಇಲ್ಲ.

## ಬದುಕು–ಬರಹ:

ಚಿಕ್ಕಮಗಳೂರು ಜಿಲ್ಲೆಯ ಕಳಸದಲ್ಲಿ ಜನಿಸಿದ ನಾಡಿಗರು ಹಲವು ಊರುಗಳ ನೀರು ಕುಡಿದವರು. ಅವರ ಬದುಕು ಸರಳ ರೇಖೆಯ ಕೈವಲ್ಯವಲ್ಲ. ಅದು ಅಡಿಗರು ಒಂದೆಡೆ ಹೇಳುವಂತೆ 'ತಿರಿಮುರಿ ಅಂಕುಡೊಂಕಿನ' ಶತ. ಸರಕಾರಿ ನೌಕರಿಯಲ್ಲಿದ್ದ ತಂದೆಗೆ ಆಗಾಗ ವರ್ಗವಾಗುತ್ತಿದ್ದುದರಿಂದ ಇವರು ಬಾಲ್ಯದಿಂದಲೂ ಊರೂರು ಅಲೆಯಬೇಕಾಯಿತು. ಆದರೂ ಕಷ್ಟಪಟ್ಟು, ಓದಿ, ಎಂ.ಎ. ಮಾಡಿ, ಇಂಗ್ಲಿಷ್

ಪ್ರಾಧ್ಯಾಪಕರಾಗಿ ಬೆಳಗಾಂವ್, ಮಡಗಾಂವ್, ಮಾಪುಸಾ, ಮುಂಬಯಿಗಳಲ್ಲಿ ಕೆಲಸ ಮಾಡಿ, ಕೆಲಸ ಬಿಟ್ಟು, ಅಮೇರಿಕದ ಟೆಂಪಲ್‌ಟನ್ ವಿಶ್ವವಿದ್ಯಾಲಯದಲ್ಲಿ ಪಿಎಚ್‌ಡಿ ಮಾಡಲು ಹೋಗಿ ಅದನ್ನು ಮುಗಿಸದೆ ಹಿಂತಿರುಗಿ, ನಿರುದ್ಯೋಗಿಯಾಗಿ, ಬೆಂಗಳೂರಿನಲ್ಲಿ ಪುಸ್ತಕದಂಗಡಿಯಿಟ್ಟು ಆ ವ್ಯಾಪಾರದಲ್ಲಿ ನಷ್ಟ ಅನುಭವಿಸಿ, ಕೊನೆಗೆ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಸೇರಿದ ನಂತರವೇ ಅಲೆಮಾರಿ ಜೀವನಕ್ಕೊಂದು ನೆಲೆ ದೊರೆತದ್ದು. ಆದರೆ ಈ ಅವಧಿಯಲ್ಲಿ ನಾಡಿಗರು ಸಂಪಾದಿಸಿದ ಅನುಭವ ಅಪಾರ. ಪ್ರೊ. ಎ.ಬಿ.ಷಾ, ಶಿಬ್‌ನಾರಾಯಣರೇ ಮುಂತಾದ ವಿಖ್ಯಾತ ಧೀಮಂತ ಚಿಂತಕರ ಸ್ನೇಹ, ಒಡನಾಟ, ಅಮೇರಿಕದ ಭೋಗಪ್ರಧಾನ ವ್ಯಾಪಾರೀ ಸಂಸ್ಕೃತಿಗೆ ಒಡ್ಡಿಕೊಂಡರೂ ಅದರಲ್ಲಿ ಮುಳುಗಿ ಕಳೆದುಹೋಗದೆ (ಡಾಲರ್ ಸೈತಾನನಿಗೆ ಆತ್ಮಕೊಟ್ಟು, ಫಾಸ್ಟಸ್ ಆಗಿ ನರಳಲು ನಿರಾಕರಿಸಿ) ಭಾರತೀಯ ಸಂಸ್ಕೃತಿಯ ಚಿಂತನೆ ಆರ್ಷ ಮೌಲ್ಯಗಳ ಕಡೆ ಹೊರಳಿದ್ದು, ಅವರ ಜೀವನದ ಮುಖ್ಯ ತಿರುವು. ಅವರೇ ಹೇಳುವಂತೆ

**ಈ ನನ್ನ ಕಾವ್ಯವಿದು**
**ಶ್ರುತಿಯಾಗಬೇಕೆಂದು**
**ಸ್ಮೃತಿಯಾಗಬೇಕೆಂದು**
**ಸ್ಮರಚಿತ್ತನಾದವನು**
**ಸ್ವರಚಿತ್ತನಾಗುತ್ತ ಸ್ವಾಸ್ಥ್ಯಕ್ಕೆ ಬಂದೆನಿಲ್ಲಿ** (ದಾಂಪತ್ಯಗೀತ)

ಇದು ಅಸ್ವಾಸ್ಥ್ಯದಿಂದ ಸ್ವಾಸ್ಥ್ಯದ ಕಡೆಗಿನ ಯಾತ್ರೆ ಎಂಬುದು ಅವರ ವಿವರಣೆ. ಇದನ್ನು ಆಧುನಿಕತೆಯಿಂದ ವೈದಿಕತೆಯ ಕಡೆಗೆ ಹಿನ್ನಡೆ ಎನ್ನುವವರೂ ಇರಬಹುದು. ಆದರೆ 'ಪಂಚಭೂತ'ಗಳೇನೂ ಭೂತಕಾಲದ ಪಳೆಯುಳಿಕೆಗಳಲ್ಲ. ಅವು ನಮ್ಮೆಲ್ಲರ ಜೀವನದ ಒಳಹೊರಗುಗಳನ್ನು ಆವರಿಸಿರುವ ಸಾರ್ವಕಾಲಿಕ ಭೂಮಸತ್ಯಗಳಾಗಿರುವುದರಿಂದ ಚಿರನೂತನ ಕಾವ್ಯವಸ್ತುಗಳಾಗಿವೆ. ಅಲ್ಲದೆ ಕಾವ್ಯಕ್ಕೆ ಯಾವುದೂ ವಸ್ತುವಾಗಬಹುದು. ಕವಿ ಅದನ್ನು ಹೇಗೆ ನಿರ್ವಹಿಸಿದ್ದಾನೆಂಬುದೇ ಮುಖ್ಯ. ಬಡವರ ಮೇಲೆ, ರಾಜರು, ವಣಿಜರು, ಪುರೋಹಿತರು ಸೇರಿ ನಡೆಸಿದ ಕ್ರೂರ ಶೋಷಣೆಯನ್ನು ಟೀಕಿಸಲು ಅಡಿಗರು ಯಜ್ಞಕ್ಕೆ ಸಂಬಂಧಿಸಿದ ಪ್ರತಿಮೆಗಳನ್ನು ಬಳಸುತ್ತಾರೆ. ಸಮಕಾಲೀನ ಮತ್ತು ಸಾರ್ವಕಾಲಿಕಗಳ ಸಮ್ಮಿಲನ ಹಾಗೂ ಸಮನ್ವಯವು ಉತ್ತಮ ಸಾಹಿತ್ಯದ ಒಂದು ಮಹತ್ವದ ಅಂಗವಷ್ಟೆ. ವಿಮರ್ಶಕ ಮಲ್ಲೇಪುರಂ ವೆಂಕಟೇಶ್ ಅವರು "ಅವರು ಎಲಿಯಟ್‌ನ ಕಾವ್ಯದಲ್ಲಿ ಹೊಸತನದ ಬೆಡಗನ್ನು ಮೂಡಿಸಿದ ಕ್ರಮವೇ ಪಂಚಭೂತದಲ್ಲೂ ಉಂಟು" ಎಂದು ಹೇಳಿರುವುದನ್ನು ಇಲ್ಲಿ ಗಮನಿಸಬೇಕು. ನಾಡಿಗರ **'ಪಂಚಭೂತಗಳು'** ವೈದಿಕ ಸೂಕ್ತಗಳ, ಮಂತ್ರಗಳ ಸಾರಾನುವಾದವಲ್ಲ. ಅವುಗಳ ದರ್ಶನದಿಂದ ಸ್ಫೂರ್ತವಾದ ಸ್ವತಂತ್ರ ಕೃತಿ. ವೈದಿಕ ಸಾಹಿತ್ಯ ದ್ರವ್ಯವನ್ನು ಬಳಸಿಕೊಂಡಿರುವುದರ

ಬಗ್ಗೆ ಅವರಿಗೆ ಸಂಕೋಚವಿಲ್ಲ. 'ಯಾರಾದರೂ ನನ್ನನ್ನು ವೈದಿಕ ಕವಿ ಎಂದು ಕರೆದರೆ ನಾನು ಅದಕ್ಕೆ ಹೆಮ್ಮೆ ಪಡುತ್ತೇನೆ' ಎನ್ನುವ ದಿಟ್ಟತನ ಅವರದು.

## ಹೊಸ ಎತ್ತರಗಳಿಗೆ ಜಿಗಿತ:

ನಾಡಿಗರು ದೆಹಲಿಯ ನ್ಯಾಷನಲ್ ಬುಕ್ ಟ್ರಸ್ಟ್‌ನ ಅಧ್ಯಕ್ಷರಾಗಿದ್ದ ಕಾಲಾವಧಿಯಲ್ಲಿ (1996–99) ದೇಶದ ವಿವಿಧ ಭಾಷೆಗಳ ಸಾಹಿತ್ಯ ಹಾಗೂ ಸಾಹಿತಿಗಳ ಪರಿಚಯದ ಅವಕಾಶ ದೊರೆಯಿತು. ಇದರಿಂದ ಅವರ ಸಾಹಿತ್ಯ, ಚಿಂತನೆ ಇನ್ನಷ್ಟು ಗಾಢವಾಗಿ ಮುಂದಿನ ಸಾಹಿತ್ಯ ಕೃತಿಗಳ ಸ್ವರೂಪ ಮತ್ತು ಅದರ ತಾತ್ವಿಕ ಭಿತ್ತಿಯ ಬಗ್ಗೆ ಮರುಚಿಂತನೆಗೆ ಕಾರಣವಾಗಿರಬಹುದು. **'ದಾಂಪತ್ಯಗೀತ'**ದ ನಂತರ ಶ್ರುತಿಸ್ಮೃತಿಗಳ ಪ್ರಜ್ಞೆ ಅವರ ಕೃತಿಗಳಲ್ಲಿ ಬೆಳೆಯುತ್ತಿರುವುದನ್ನು ನೋಡುತ್ತಿದ್ದೇವೆ. ಮುಂದಿನ ಕೃತಿಗಳಲ್ಲಿ ಇದರ ಇನ್ನಷ್ಟು ಪರಿಪಕ್ವಫಲಗಳನ್ನು ನಿರೀಕ್ಷಿಸಬಹುದು.

ಶ್ರೇಷ್ಠ ಕಾವ್ಯ ಸೃಷ್ಟಿಯ ಧ್ಯಾನದಲ್ಲಿ ತೊಡಗಿಕೊಂಡಿದ್ದರೂ, ನಾಡಿಗರು ತಮ್ಮ ಸುತ್ತಮುತ್ತಲು ನಡೆಯುತ್ತಿರುವ ಘಟನೆಗಳ ಬಗ್ಗೆ ಪ್ರತಿಕ್ರಿಯಿಸುವುದನ್ನು ಬಿಟ್ಟಿಲ್ಲ. ಅದು ರಾಮಕೃಷ್ಣ ಹೆಗಡೆ, ದೇವೇಗೌಡ, ಅನಂತಮೂರ್ತಿ ಗಿರೀಶ್ ಮಟ್ಟೆಣ್ಣನವರ್‌ರಂಥ ವ್ಯಕ್ತಿಗಳನ್ನು ಕುರಿತ ಕವನಗಳಿರಬಹುದು, ಬೇಂದ್ರೆಯವರ 'ಹಕ್ಕಿಹಾರುತಿದೆ...' ಕುವೆಂಪು ಅವರ **'ನಾಡಗೀತೆ'**, ನಿಸಾರರ **'ನಿತ್ಯೋತ್ಸವ'**ದಂಥ ಜನಪ್ರಿಯ ಕವನಗಳ ನಿಷ್ಠುರ ವಿಮರ್ಶೆಯಾಗಿರಬಹುದು. ಅಥವಾ ಅವರು ಬರೆದ ಐದು **'ಸಾಹಿತ್ಯ ಚರಿತ್ರೆ'**ಗಳಲ್ಲಿ ಸಮರ್ಥವಾಗಿ ವ್ಯಕ್ತವಾಗಿರುವ ವೈವಿಧ್ಯಮಯ ವಿಚಾರಗಳಿರಬಹುದು. ಎಲ್ಲ ಕಡೆಯಲ್ಲೂ ನಾಡಿಗರು ಯಾವುದೇ ದಾಕ್ಷಿಣ್ಯಕ್ಕೊಳಗಾಗದೆ, ದೊಡ್ಡವರ ಅನುಯಾಯಿಗಳನ್ನು ಎದುರುಹಾಕಿಕೊಳ್ಳುವ ಅಪಾಯವನ್ನೂ ಲೆಕ್ಕಿಸದೆ ತಮ್ಮ ಬೌದ್ಧಿಕ ಪ್ರಾಮಾಣಿಕತೆಯನ್ನು ತೋರಿದ್ದಾರೆ. ತನ್ನ ಪ್ರತಿಮೆ (Image) ಬಗ್ಗೆ ತಲೆ ಕೆಡಿಸಿಕೊಳ್ಳದೆ, ವ್ಯಾವಹಾರಿಕ ಜಾಣತನಕ್ಕೆ ಮಾರಿಕೊಳ್ಳದೆ, ಆತ್ಮಸಾಕ್ಷಿಯನ್ನಷ್ಟೇ ಆದರಿಸುತ್ತಾ, ಅನುಸರಿಸುತ್ತಾ, ಧೈರ್ಯದಿಂದ ಮುನ್ನಡೆದಿದ್ದಾರೆ. ಹೀಗೆಂದಮಾತ್ರಕ್ಕೆ ಅವರು ಬರೆದ್ದೆಲ್ಲಾ ಅಪರಂಜಿ ಚಿನ್ನ, ಅವುಗಳಲ್ಲಿ ದೋಷಗಳೇ ಇಲ್ಲ ಎಂದಲ್ಲ. ದೋಷಗಳು ಮಹಾಕವಿಗಳ ಕೃತಿಗಳಲ್ಲೂ ಇರಬಹುದು. ಮಾಸ್ತಿಯವರು ಒಂದೆಡೆ ಹೇಳಿರುವಂತೆ 'ಶ್ರೇಷ್ಠತೆಯ ಮಾನದಂಡ ಗುಣಾಧಿಕ್ಯವೇ ಹೊರತು ದೋಷರಾಹಿತ್ಯವಲ್ಲ.' ಈ ದೃಷ್ಟಿಯಿಂದ ನೋಡಿದರೆ ನಾಡಿಗರ ಕೃತಿಗಳಲ್ಲಿ ಗುಣಾಧಿಕ್ಯ ನಿಚ್ಚಳವಾಗಿ ಗೋಚರಿಸುತ್ತದೆ.

ಮುಂದಿನ ದಿನಗಳಲ್ಲಿ ಅವರ ಕಾವ್ಯ ತಪಸ್ಸು, ಇನ್ನೂ ಶ್ರೇಷ್ಠ ಕೃತಿಗಳ ಸೃಷ್ಟಿಗೆ ಕಾರಣವಾಗಿ ಸಫಲವಾಗಲಿ. ಅವರು ರಚಿಸಿರುವ ಸಾಹಿತ್ಯಕ್ಕೆ ಇನ್ನೂ ಹೆಚ್ಚಿನ ಓದು, ಮನ್ನಣೆ ದೊರೆಯುವಂತಾಗಲಿ. ■

# ನಿರ್ಭಿಡೆಯ ವಿಮರ್ಶಕ ಕವಿ ಡಾ. ಸುಮತೀಂದ್ರ ನಾಡಿಗ

✍... ಎಂ.ಕೆ. ಗೋಪಿನಾಥ್



ಅವರು ನಾಡಿನ ಗಣ್ಯಕವಿಗಳಲ್ಲಿ ಒಬ್ಬರು. ಬೇಂದ್ರೆಯವರ ಕಾವ್ಯವನ್ನು ಕುರಿತು ಅವರು ಬರೆದ ಪ್ರೌಢ ಪ್ರಬಂಧಕ್ಕೆ ಡಾಕ್ಟರೇಟ್ ಗೌರವ ಸಂದಿದೆ. ಅಡಿಗರ ನವ್ಯ ಪರಂಪರೆಯ ಕಾವ್ಯವನ್ನು ಓದುಗರಿಗೆ ಅರ್ಥವಿಸಿ ಹೇಳುವುದಕ್ಕಾಗಿ ತಮ್ಮ ಸ್ವಂತ ಕೃತಿರಚನೆಯನ್ನೇ ಸ್ಥಗಿತಗೊಳಿಸಿಕೊಂಡವರು. ಹೆಸರಾಂತ ಕತೆಗಾರರು. ನುರಿತ ವಿಮರ್ಶಕರು. ಮೂವತ್ತೈದು ವರ್ಷಗಳ ಪರ್ಯಂತ ಬೆಳಗಾವಿ, ಮುಂಬಯಿ, ಗೋವಾಗಳ ಕಾಲೇಜುಗಳಲ್ಲಿ ಇಂಗ್ಲಿಷ್ ಪಾಠ ಹೇಳಿ ಪ್ರಸ್ತುತ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಇಂಗ್ಲಿಷ್ ಅಧ್ಯಾಪಕರು. ಮೂರು ವರ್ಷಗಳ ಕಾಲ ಅಮೆರಿಕದ ಫಿಲಡೆಲ್ಫಿಯಾ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪಾಠ ಹೇಳುತ್ತಾ ಡಾಕ್ಟೋರಲ್ ಪ್ರಬಂಧ ಬರೆಯಲು ಸಿದ್ಧತೆ ನಡೆಸುತ್ತಿದ್ದರು. ಹೋದ ಕೆಲಸ ಪೂರೈಸುವ ಮೊದಲೇ ತಾಯ್ನಾಡು ಕೂಗಿ ಕರೆಯಿತು.

ಇಷ್ಟಾಗಿಯೂ ಇವರು ಐದು ವರ್ಷಗಳ ಕಾಲ ಬೋಧಕ ವೃತ್ತಿಯಿಂದ ಹೊರಬಂದು ಪುಸ್ತಕ ವ್ಯಾಪಾರಿಯಾಗಿ ಜೀವಿಸಬೇಕಾಯಿತು.

ಮೇಲಿನ ದೀರ್ಘ ಪೀಠಿಕೆಗೆ ವಸ್ತು ಡಾ. ಸುಮತೀಂದ್ರ ರಾಘವೇಂದ್ರ ನಾಡಿಗ ತಮ್ಮ ಬರಹಗಳ ಮಟ್ಟಿಗೆ 'ಸುಮತೀಂದ್ರ ನಾಡಿಗ' ಎಂದು ಹೆಸರು ನಮೂದಿಸಿಕೊಳ್ಳುತ್ತಾರೆ. ನಿಕಟವಾಗಿ ಬಲ್ಲವರಿಗೆ ಅವರು 'ನಾಡಿಗ.'

ಬೇರಿತರ ಚರ್ಚೆಗಳು ಅವರೊಂದಿಗೆ ಸಾಧ್ಯವೇ ಇಲ್ಲವೆನ್ನಿಸುವಷ್ಟು ಸಾಹಿತ್ಯದಲ್ಲಿ ತೊಡಗಿಕೊಂಡಿರುವ ಡಾ. ಸುಮತೀಂದರ ನಾಡಿಗರ ಹುಟ್ಟೂರು ಕಳಸ. (ಜನನ: 04-05-1935)

ಸೆಂಟ್ರಲ್ ಕಾಲೇಜಿನಲ್ಲಿ ಕಲಿಯುತ್ತಿದ್ದ ಕಾಲದಲ್ಲೇ ಪದ್ಯರಚನೆಗೆ ಆರಂಭಿಸಿದ ಡಾ. ಸುಮತೀಂದ್ರ ನಾಡಿಗರ ಮೊದಲ ಪದ್ಯಗಳು ದಿವಂಗತ ಜೆ.ಪಿ. ರಾಜರತ್ನಂ ಅವರ ಗಮನ ಸೆಳೆದವು. 'ನಾಡಿಗ್, ನೀನೀಗ ನಿಜವಾದ ಕವಿ' ಎಂದು ಪ್ರೊ॥ ಜಿ.ಎಸ್. ಶಿವರುದ್ರಪ್ಪನವರು ಉತ್ತೇಜಕ ಮಾತುಗಳನ್ನಾಡಿದರು. 1964ರಲ್ಲಿ

ಅವರ ಮೊದಲ ಕವನಸಂಕಲನ ಹೊರಬಂತು. ಎಳೆಹರೆಯದ ಹೊಸಕವಿಯೊಬ್ಬನ ರಚನೆಗಳಿಗಾಗಿ ಪದ್ಯಗಳು ವಿಮರ್ಶಕರ ಓದುಗರ ಗಮನ ಸೆಳೆದವು. 1970ರ ಅವರ **'ಕಪ್ಪುದೇವತೆ'** ಕವನ ಸಂಗ್ರಹ ಅಡಿಗರ ಮುನ್ನುಡಿಯೊಂದಿಗೆ ಹೊರಬಂತು. ಅವರ ಹಿಂದಿನ ಕವಿತೆಗಳಿಗಿಂತ ಭಿನ್ನ ಧಾಟಿಯ ಪದ್ಯಗಳುಳ್ಳ ಅವರ ಮೂರನೆಯ ಕವಿತಾಸಂಗ್ರಹ **'ಉದ್ಘಾಟನೆ'** 1983ರಲ್ಲಿ ಹೊರಬಂದು, ನಾಡಿಗರ ನಾಲ್ಕನೆಯ ಕವನ ಸಂಗ್ರಹ **'ಭಾವಲೋಕ'**ದ ಹೊತ್ತಿಗೆ ನಾಡಿಗರು ಕಾವ್ಯಲೋಕದ ಒಂದು ಸುತ್ತು ಮುಗಿಸಿ, ಸಂಪೂರ್ಣವಾಗಿ ಪರಿವರ್ತಿತವಾದ ಕವಿಯಾಗಿದ್ದರು. ನವ್ಯದ ಗದ್ಯತನದಿಂದ ದೂರ ಜಿಗಿದು, ಭಾವಗೀತೆಗಳಿಗೆ ಅವರು ಒಗ್ಗಿಕೊಂಡಿದ್ದುದರ ಕುರುಹಾಗಿ ಅವರ ಐದನೆಯ ಕವನ ಸಂಕಲನ **'ಕುಹೂಗೀತ'** ಬಂದಿದೆ. ವ್ಯಂಗ್ಯ ಆಕ್ರೋಶಗಳು ಮೃದುತಲ ಮಧುರ ಭಾವಗಳಿಗೆಡೆಮಾಡಿಕೊಟ್ಟಿವೆ. ಹಾಡಿಕೆಗೆ ಬಂದು ಎಂದಾಕ್ಷಣ ಪದ್ಯದ ಇತರ ಗುಣಗಳಿಗೇನೂ ಕುಂದುಬರುವುದಿಲ್ಲ ಎಂಬುದು 'ಕುಹೂಗೀತ'ದ ಕುಹೂ.

**'ದಾಂಪತ್ಯಗೀತ'** (1987) ಬಹುಶಃ ನಾಡಿಗರ ಕಾವ್ಯಶಕ್ತಿಯ ಒಂದು ಮುಖ್ಯ ಮಜಲು. ನಾಡಿಗರ ಎಲ್ಲ ತಿಳಿವೂ ತತ್ವವೂ ಖಾಸಗಿ ಬದುಕಿನ ಚಿಕ್ಕಪುಟ್ಟ ವಿವರಗಳು ಕೂಡ ಇಲ್ಲಿ ಆತ್ಮಕಥನದ ರೂಪ ತಳೆದು ಮೈದಾಳಿವೆ.

ಝೇಂಕಾರಯುಕ್ತವಾದ ಲಯಗಾರಿಕೆಯೊಂದು ಈ ಖಂಡಕಾವ್ಯದ ಸೂತ್ರಪ್ರಾಯವಾಗಿ ನಿಂತು ಕಾವ್ಯವನ್ನು ನಿರಾಯಾಸವಾಗಿ ಮುಂದಕ್ಕೆ ಸಾಗಿಸುತ್ತದೆ. **'ದಾಂಪತ್ಯಗೀತ'** ಗೀತರೂಪದಲ್ಲಿ ಹೊಮ್ಮಿರುವ ಆತ್ಮಕಥನ; ಆತ್ಮಸಂವಾದ.

ಈ ಕಥನದಲ್ಲಿ ಮುಚ್ಚಿಟ್ಟಿರುವುದು ಏನೂ ಇಲ್ಲ; ಬಿಚ್ಚಿಕೊಟ್ಟಿರುವುದು ಬಹಳ. ಅಗೆವ ಬುದ್ಧಿಗೆ ಇಲ್ಲಿ ಅನಂತಾವಕಾಶವುಂಟು.

**'ಇಷ್ಟರಾದವರಲ್ಲಿ ಇದರ ರುಚಿ ಹೇಳೋಣ**
**ಅವರ ಇಷ್ಟಾರ್ಥಗಳು ನೆರವೇರಲಿ'**

ಎನ್ನುವ ಕಾವ್ಯದ ಆಶಯ ವಾಕ್ಯವೇ ಇಡೀ ಖಂಡಕಾವ್ಯದ ಜೀವಧ್ವನಿ. ನಾಡಿಗರು ತಮ್ಮನ್ನು ತಾವೇ ವಿಶ್ಲೇಷಿಸಿಕೊಳ್ಳುವ ಬಗೆ ಹೀಗೆ –

**'ನಾನು ಯಾರೋ ಬೇರೆ ಆ ನಾಡಿಗನೆ ಬೇರೆ**
**ಇಂಥ ಭಾವನೆಯೊಂದು ತಲೆಹಾಕಿದೆ.**
**ಅವನ ಜೊತೆ ಮಾತಾಡಿ ಅವನಿಗೆಚ್ಚರ ಹೇಳಿ**
**ಜೊತೆಗೆ ಕರೆದೊಯ್ಯುವುದು ಶುರುವಾಗಿದೆ.**

**ಈ ಲೋಕ ಸಂಬಂಧ ನೀರಮೇಲಿನ ಗುಳ್ಳೆ**

**ಅದು ಕೂಡ ಸತ್ಯವೇ ಅವನ ವಾದ'**

ಕಾವ್ಯದೇವತೆಯನ್ನು ಒಲಿಸಿಕೊಳ್ಳಲು ನಾಡಿಗರು ಜೀವನದುದ್ದಕ್ಕೂ ನಡೆಸಿದ ಹೋರಾಟ

**ಕಾವ್ಯಮೃತವ ಕರೆವ ಕಾಮಧೇನುವಿಗಾಗಿ**
**ಕಾದಿದ್ದು ಎಷ್ಟು ನಿನಗೆ'**

ಎನ್ನುವ ಮಾತುಗಳಲ್ಲಿ ಸೂಚಿಸುತ್ತಾರೆ. ಕೊನೆಗೆ ಆ ಕಾವ್ಯದೇವತೆ ನಾಡಿಗರಿಗೆ ಒಲಿದಳು ಎಂಬುದರ ದ್ಯೋತಕವಾಗಿ 'ದಾಂಪತ್ಯಗೀತ' ಪಡಿಮೂಡಿದೆ. ನಾಡಿಗರ ಈವರೆಗಿನ ಎಲ್ಲ ಕಾವ್ಯ ಕೃಷಿಯನ್ನು ಒತ್ತಟ್ಟಿಗಿಟ್ಟು 'ದಾಂಪತ್ಯಗೀತ' ಒಂದನ್ನೇ ಪ್ರತ್ಯೇಕವಾಗಿ ಗಮನಿಸಬೇಕಾಗುತ್ತದೆ. ಅಂಥ ವಿಶಿಷ್ಟ ನಾದಮಯತೆ, ನರುಗುಂಪು 'ದಾಂಪತ್ಯಗೀತ'ದ್ದು.

'ನೀವು ಪದ್ಯ ಬರೆಯದಿರುವುದೇ ಒಳ್ಳೆಯದು' ಎಂದೊಮ್ಮೆ ಛೇಡಿಸಿದ್ದ ಡಾ। ಪು.ತಿ.ನ. 'ದಾಂಪತ್ಯಗೀತ'ವನ್ನು ಮೆಚ್ಚಿ ಚಪ್ಪರಿಸಿ ಎರಡು ಪುಟಗಳ ಪತ್ರ ಬರೆದಿದ್ದಾರೆ!

ಮೂರು ಮುಖದ ನಾಡಿಗರ ಸೃಷ್ಟಿಶೀಲತೆ, ಈವರೆಗೆ ಸುಮಾರು ನಲವತ್ತು ಕತೆಗಳನ್ನು ಅವರಿಂದ ಬರೆಸಿವೆ. 'ಗಿಳಿ ಮತ್ತು ದುಂಬಿ', 'ಸುಟ್ಟ ಬೆರಳು', 'ಸಂಪಿಗೆ ಮರ', 'ಹಂಚಿಕೆ', 'ಬೇರು ಬಿಟ್ಟವನು', 'ಸ್ವಾವಲಂಬನೆಗೆ ಬ್ಲೇಡೆ ಸರಿ' – ಇವು ನಾಡಿಗರ ಪ್ರಾತಿನಿಧಿಕ ಕತೆಗಳಲ್ಲಿ ಕೆಲವು. ಕಥೆಯ ವಸ್ತುವಿಗಿಂತ ಕತೆ ಹೇಳುವುದರ ಕಡೆಗೆ ನಾಡಿಗರು ಹೆಚ್ಚು ಒಲವು ತೋರುತ್ತಾರೆ. ಬಹುವೇಳೆ ಕಥೆಗೆ ಸಂಬಂಧವೇ ಇಲ್ಲದಂಥ ವಿವರಗಳು ಕೂಡಾ ಮನೋವ್ಯಾಪಾರದ ಪಾತಳಿಗಳನ್ನು ಸ್ಪರ್ಶಿಸುತ್ತಾ ಒಟ್ಟು ಕತೆಗೆ ಗೂಢತೆಯನ್ನು ಕಟ್ಟಿಕೊಟ್ಟು ಬೇರಾಗುತ್ತವೆ. ತಂತ್ರಗಾರಿಕೆಯಾಗಲಿ, ಭಾಷೆಯ ಅಬ್ಬರವಾಗಲಿ ನಾಡಿಗರ ಕತೆಗಳಲ್ಲಿ ಕಾಣುವುದು ದುಃಸಾಧ್ಯ. ನೇರವಾದ, ಸ್ಪಷ್ಟವಾದ ಆದರೆ ಸ್ವಲ್ಪ ವೇಗದ ನಿರೂಪಣಾ ವಿಧಾನ ನಾಡಿಗರದು. ಅವರ ಎರಡು ಕಥಾಸಂಗ್ರಹಗಳು ಈವರೆಗೆ ಪ್ರಕಟಗೊಂಡಿವೆ. [ಕಾರ್ಕೋಟಕ (1975) ಮತ್ತು ಗಿಳಿ ಮತ್ತು ದುಂಬಿ (1984)] ನಾಡಿಗರ ಆಯ್ದ ಕತೆಗಳು ಬೆಂಗಳೂರು ವಿಶ್ವವಿದ್ಯಾಲಯದ ಪ್ರಥಮ ಬಿ.ಎ., ಬಿ.ಎಸ್.ಸಿ. ಮತ್ತು ಬಿ.ಕಾಂ. ತರಗತಿಗಳಿಗೆ 92ರ ಸಾಲಿನ ಪಠ್ಯವಾಗಿದ್ದವು.

**'ಸಾಹಸ'** (ಮಕ್ಕಳ ಕಾದಂಬರಿ) **'ಹನ್ನೊಂದು ಹಂಸಗಳು** (ಮಕ್ಕಳ ನಾಟಕ) ಡಾ। ನಾಡಿಗ್ ನಾಡಿನ ಮಕ್ಕಳಿಗಾಗಿ ಬರೆದ ಸಾಹಿತ್ಯ.

**'ಎಂ. ಗೋಪಾಲಕೃಷ್ಣ ಅಡಿಗ: ಒಂದು ಕಾವ್ಯಾಭ್ಯಾಸ'** ಎನ್ನುವ ಹೆಸರಿನ, ಅಡಿಗರ ಕವನಗಳನ್ನು ವಿಶ್ಲೇಷಿಸುವ ವಿಮರ್ಶಾಕೃತಿ ಮೊದಲು 1968ರಲ್ಲಿ ಪ್ರಕಟವಾಗಿ,

1975ರಲ್ಲಿ 'ಅಡಿಗರ ಕಾವ್ಯ' ಎನ್ನುವ ಹೆಸರಿನಲ್ಲಿ ಪುನರ್ ಮುದ್ರಣಗೊಂಡಿತು. ಈ ಗ್ರಂಥದ ಉದ್ದೇಶ ಅಡಿಗರ ಕಾವ್ಯವನ್ನು ಅರ್ಥಮಾಡಿಕೊಳ್ಳುವಲ್ಲಿ ಓದುಗರಿಗೆ ನೆರವಾಗುವುದು. ಅಲ್ಲದೆ ಹೆಚ್ಚು ಹೆಚ್ಚು ಜನರಿಗೆ ಕಾವ್ಯದ ಬಗ್ಗೆ ವಿಶ್ವಾಸ ಮೂಡಿಸಬೇಕು ಎನ್ನುವುದು. ಎರಡು ಉದ್ದೇಶಗಳೂ ಈ ಕೃತಿಯಲ್ಲಿ ಸಫಲವಾಗಿವೆ. ಕ್ಲಿಷ್ಟವಾದದ್ದನ್ನು ಸರಳಗೊಳಿಸುವುದು ವಿಮರ್ಶಕನ ಕೆಲಸಗಳಲ್ಲಿ ಒಂದು. ಆ ಕೆಲಸ ಇಲ್ಲಿ ತುಂಬ ಅಚ್ಚುಕಟ್ಟಾಗಿ ನಡೆದಿದೆ.

**'ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು'** ಎನ್ನುವ ಮಹಾಪ್ರಬಂಧ ನಾಡಿಗರಿಗೆ 1985ರಲ್ಲಿ ಡಾಕ್ಟರೇಟ್ ಗಳಿಸಿಕೊಟ್ಟ ಕೃತಿ. ಒಬ್ಬ ಕವಿಯ ಎಲ್ಲ ಕವನಗಳನ್ನೂ ತೌಲನಿಕ ದೃಷ್ಟಿಯಿಂದ ಅಭ್ಯಾಸ ಮಾಡಿ ಕವಿಯ ವೈಯಕ್ತಿಕ ಬದುಕಿನ ಹಿನ್ನೆಲೆಗಳು ಕಾವ್ಯವಾಗಿ ಪಡಿಮೂಡಿದ್ದನ್ನು ಹಿಂಜಿ ಹಿಂಜಿ ಬಿಡಿಸಿಟ್ಟಿರುವ ವಿಮರ್ಶನ ಗ್ರಂಥ ಇದು. ಬೇಂದ್ರೆಯವರನ್ನು ಕುರಿತಂತೆ ಬಂದಿರುವ ಎಲ್ಲ ಬರಹಗಳನ್ನೂ ಲಕ್ಷ್ಯವಿರಿಸಿ ಓದಿ, ಗ್ರಾಹ್ಯವಾದುದನ್ನು ಗುರು ಮಾಡಿ ತೋರಿ, ಸಬ್ ಎಂಡಾ ತೆರನ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯವಾಗಿ ತೂರಿರುವ ಇಲ್ಲಿನ ಬರಹದ ಕ್ರಮದಲ್ಲೂ ಒಂದು ನವೀನವಾದ ಹಾದಿಯನ್ನು ಡಾ। ನಾಡಿಗರು ಹಿಡಿದಿದ್ದಾರೆ. ಅಭ್ಯಾಸ- ಅರ್ಥೈಸಿಕೊಳ್ಳುವಿಕೆ ಈ ಎರಡೂ ಅಗತ್ಯಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಬೇಂದ್ರೆಯವರ ಕಾವ್ಯವನ್ನು ಡಾ। ನಾಡಿಗರು ನಾಲ್ಕು ನೆಲೆಗಳಲ್ಲಿ ನಿಲ್ಲಿಸುತ್ತಾರೆ.

ಸಂಶೋಧನೆ ಹಾಗೂ ವಿಮರ್ಶೆಗಳು ಸಮಾನಾಂತರವಾಗಿ ಸಾಗುವ ಈ ಕೃತಿಯ ಹಿರಿಮೆಯನ್ನು ಎರಡು ಸ್ತರಗಳಲ್ಲಿ ಗುರುತಿಸಬಹುದು. 1) ಮುಂದೆ ಬೇಂದ್ರೆ ಕಾವ್ಯದ ಕುರಿತು ಬರೆಯಹೊರಡುವವರು ಪಡಬೇಕಾದ ಪಾಡನ್ನೆಲ್ಲಾ ಡಾ। ನಾಡಿಗರು ಪಟ್ಟುಬಿಟ್ಟು, ಅದರ ಫಲರೂಪವನ್ನು ವಿಮರ್ಶಕರಿಗೆ ಒದಗಿಸಿದ್ದಾರೆ. 2) ಬೇಂದ್ರೆಯವರಂಥ ಒಬ್ಬ ಯುಗಪ್ರವರ್ತಕ ಕವಿಯ ಎಲ್ಲ ಕೃತಿಗಳನ್ನು ಓದಿ ಅದರ ಲಕ್ಷಣಗಳನ್ನು ಬರಹದಲ್ಲಿ ಹಿಡಿಯುವುದು ಸಾಧ್ಯ ಎಂಬುದನ್ನು ಡಾ। ನಾಡಿಗರು ಸಾಬೀತು ಮಾಡಿದ್ದಾರೆ. ಇದೊಂದು ವಿರಳ ಕೃತಿಯೆಂದು ಚೆನ್ನವೀರ ಕಣವಿಯವರು ಮುನ್ನುಡಿಯಲ್ಲಿ ಹೇಳಿರುವುದು ಉಚಿತವಾಗಿಯೇ ಇದೆ.

'(ಬೇಂದ್ರೆ ಕಾವ್ಯದ) ಕಾಡಿನ ವಿಸ್ತಾರವನ್ನು, ಇಲ್ಲಿನ ವಿವಿಧ ಸಸ್ಯಗಳ ಸಮೃದ್ಧಿಯನ್ನೂ ವಿಶಿಷ್ಟತೆಯನ್ನೂ ಹಿಡಿಯುವ ಒಂದೇ ಮಾರ್ಗವೆಂದರೆ, ಇದರಲ್ಲಿ ಓದುಗರನ್ನು ಓಡಾಡಿಸಿ, ಇಡೀ ಕಾಡನ್ನು ತಕ್ಕ ದೂರದಿಂದ ಮತ್ತು ಎತ್ತರದಿಂದ ತೋರಿಸುವ ಮಾರ್ಗದರ್ಶಿಯ ಕೆಲಸವೇ ಈ ಪುಸ್ತಕದ ಉದ್ದೇಶ'ವೆಂದು ಡಾ। ನಾಡಿಗರು ವಿನಯದಿಂದ ಹೇಳುತ್ತಾರಾದರೂ ಕೃತಿ ಅದಕ್ಕಿಂತ ಹೆಚ್ಚಿನವನ್ನು ಸಾಧಿಸಿದೆ.

ಈ ಲೇಖನಕ್ಕಾಗಿ ನಡೆದ ಸಾಹಿತ್ಯ ಸಂವಾದದ ಕಾಲದಲ್ಲಿ ಒಮ್ಮೆ ನಾಡಿಗರು 'Sometimes I feel I am a heartless person' ಎಂದರು. ಇದು ಅವರ ಸ್ವವಿಮರ್ಶೆಯ ಪರಿ. ಅವರ ಧ್ವನಿಯಲ್ಲಿ ಗತ್ತು ಘಾಟು ಇರುವಂತೆ ತೋರುತ್ತದೆ. ನಿಜದಲ್ಲಿ ಡಾ। ನಾಡಿಗರು ಅತ್ಯಂತ ಸ್ನೇಹಶೀಲ ವ್ಯಕ್ತಿ. ತಮ್ಮನ್ನು ತಾವು 'ಅತಿಯಾದ' ಆತ್ಮವಿಮರ್ಶೆಗೆ ಗುರಿಪಡಿಸಿಕೊಳ್ಳುತ್ತಾರೆ. ಉದಾಹರಣೆಗೆ ಅವರಿಗೆ ಬಾಲನರೆ ಬಂದು ಪೂರ್ವ ವಯಸ್ಸಿನಲ್ಲೆ ತಲೆಗೂದಲು ಅರಳೆಯ ಬಣ್ಣಕ್ಕೆ ತಿರುಗಿಬಿಟ್ಟಿತು. ಅದನ್ನೆ ವಸ್ತು ಮಾಡಿಕೊಂಡು 'ಬಿಳಿಗೂದಲು' ಎಂಬೊಂದು ಪ್ರಬಂಧವನ್ನು ಬರೆದರು.

ಸ್ವಾನುಭವದ ಪರಿಧಿಯನ್ನು ಶತಾಯಗತಾಯ ದಾಟದೆ, ತಮ್ಮ ಸಂವೇದನೆಗೆ, ತಿಳಿವಿಗೆ ಎಟುಕದ ಸಂಗತಿಗಳನ್ನು ಪ್ರಜ್ಞಾಪೂರ್ವಕವಾಗಿ ಕೈಬಿಟ್ಟು ಬರವಣಿಗೆ ಒಂದು ಗಂಭೀರವಾದ ಕಾಯಕ ಎಂಬ ದೃಢ ನಂಬಿಕೆ ನಾಡಿಗರ ಬೆನ್ನಿಗಿದೆ.

ಕೆಲಕಾಲ 'ಬಾಪ್ಕೊ' ಪ್ರಕಾಶನ ಸಂಸ್ಥೆಯಲ್ಲಿದ್ದು, ಉತ್ತಮ ಕನ್ನಡ ಕೃತಿಗಳು ಬೆಳಕಿಗೆ ಬರಲು ಕಾರಣರಾದರು. ಡಾ। ಜಿ.ಎಸ್. ಶಿವರುದ್ರಪ್ಪ, ಅಡಿಗ, ಕೆ.ಎಸ್. ನರಸಿಂಹಸ್ವಾಮಿ ಮತ್ತಿತರ ಕನ್ನಡ ಕವಿಗಳ ಕವನಗಳನ್ನು ಡಾ। ನಾಡಿಗ್ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಇಂಗ್ಲಿಷ್‌ನಿಂದ ಕನ್ನಡಕ್ಕೆ ಐನೆಸ್ಕೋನ ನಾಟಕ ಒಂದು (ಬೊಕ್ಕ ತಲೆಯ ನರ್ತಕಿ), ರಸ್ಕಿನ್‌ನ 'ಅನ್‌ಟು ದಿ ಲಾಸ್ಟ್' ಅನುವಾದಗೊಂಡಿವೆ. ಇದರ ಇಂಗ್ಲಿಷ್ ಭಾಷಾ ಪ್ರೌಢಿಮೆ ಕನ್ನಡಕ್ಕೂ, ಕನ್ನಡದ ಅರಿವು ಇಂಗ್ಲಿಷ್‌ಗೂ ಪರಸ್ಪರ ಪೂರಕಗಳಾಗಿರುವುದು ಡಾ। ನಾಡಿಗ್‌ರ ವಿಶೇಷತೆ.

ತರುಣನಾಗಿದ್ದ ಕಾಲದಿಂದ ಸಹಲೇಖಕರ ಪ್ರಶಂಸೆ ಪ್ರಚಾರ ಮಾಡುತ್ತಾ ಬಹುಕಾಲ ತಮ್ಮ ಸ್ವಂತ ಸಾಹಿತ್ಯರಚನೆಯನ್ನೇ ಹಿಂದಕ್ಕಟ್ಟಿದ್ದ ಡಾ। ನಾಡಿಗ್ ಇದೀಗ ಮಾಗಿದ್ದಾರೆ. ಅವರ ಬರಹದಲ್ಲೀಗ ಮಾರ್ದವ ಕಾಣುತ್ತಿದೆ. ಅವರನ್ನು ಅವರದೇ ಮಾತುಗಳಲ್ಲಿ ಬಣ್ಣಿಸಬೇಕಾದರೆ –

**'ಈ ನಾಮ ಈ ರೂಪ ನೂರಾರು ಶಕ್ತಿಗಳು**
**ರೂಪಿಸಿದ ವ್ಯಕ್ತಿತ್ವ ಕ್ಷಣಕ್ಕೊಮ್ಮೆ ಬದಲು ನಾನು**
**ಪಂಚಭೂತಗಳಲ್ಲಿ ಈ ರೂಪ ತಳೆದಿರುವ**
**ಈಗಿಲ್ಲಿ ಹೀಗಿರುವ ಅರಿವು ನಾನು'** ■

ಓದುಗರು ಅಪೇಕ್ಷಿಸುವುದಷ್ಟನ್ನಲ್ಲದೆ, ಸಾವಕಾಶವಾಗಿ ಅವರ ಜೀವನವನ್ನು ಸಂಸ್ಕರಿಸುವ, ದೀರ್ಘಕಾಲಿಕವಾಗಿ ಹಿತವೆನಿಸುವ ಗಂಭೀರ ಹಾಗೂ ಗಹನ ಸಂಗತಿಗಳನ್ನೂ ಊಡಿಸುತ್ತಿರಬೇಕು.

**–ಕೆ.ಎಸ್. ನಿಸಾರ್ ಅಹಮದ್**

## ನಾಡಿಗರೊಡನೆ ಸಂದರ್ಶನ

# 'ಕಾವ್ಯ: ಅಂತರಂಗದ ಭೂಪಟ'

✍.. ಸಂದರ್ಶಕರು: ಎಂ.ಕೆ. ಗೋಪಿನಾಥ್

ನಿರ್ದಾಕ್ಷಿಣ್ಯಕ್ಕೆ ಎಡೆಕೊಡದ ಕೃತಿನಿಷ್ಠ ವಿಮರ್ಶೆಗೆ ಡಾ। ಸುಮತೀಂದ್ರ ನಾಡಿಗ ಇನ್ನೊಂದು ಹೆಸರು. ಕಾವ್ಯ, ವಿಮರ್ಶೆ ಮತ್ತು ಕಥಾಕ್ಷೇತ್ರಗಳನ್ನು ಕುರಿತಂತೆ ಅವರೊಂದಿಗೆ ನಡೆಸಿದ ಚರ್ಚೆಯಲ್ಲಿ ಕಾಣುವ ಔಚಿತ್ಯ ಅಪೂರ್ವ ರೀತಿಯದು. ವಿವಾದಗಳನ್ನು ಸುಲಭವಾಗಿ ಸೃಷ್ಟಿಸುವಂಥದ್ದು.

*** ನೀವು ಕವಿಗಳಾಗಿ ಕತೆಗಾರರಾಗಿ ಹಾಗೂ ವಿಮರ್ಶಕರಾಗಿ ಸಾಕಷ್ಟು ಸಂಖ್ಯೆಯ ಕೃತಿಗಳನ್ನು ಈ ಎಲ್ಲ ಪ್ರಕಾರಗಳಲ್ಲಿಯೂ ರಚಿಸಿದ್ದೀರಿ. ಈ ಮೂರು ಪ್ರಕಾರಗಳಲ್ಲಿ ನಿಮ್ಮ ಮೊದಲ ಆಯ್ಕೆ ಯಾವುದು?**

– ಬೆಂದ್ರೆ, ಅಡಿಗ, ನರಸಿಂಹಸ್ವಾಮಿಯವರನ್ನು ವಿನಾಯಿಸಿ ಒಟ್ಟು ಕಾವ್ಯವನ್ನು ನೋಡಿದರೆ ನನ್ನಮಟ್ಟಿಗೆ ಬೇರಿನ್ನೊಂದು ದೊಡ್ಡ ಹೆಸರು ಕಾಣಿಸ್ತಾ ಇಲ್ಲ. ಅಲ್ಲದೆ ಕನ್ನಡದ ವಿಮರ್ಶಾ ಪ್ರಕಾರ ಎಷ್ಟು ಕಲುಷಿತವಾಗಿದೆಯೆಂದರೆ ಈ ಕ್ಷೇತ್ರದಲ್ಲಿ ತಮ್ಮ figure ಅನ್ನು ಕೆತ್ತಿಟ್ಟುಕೊಳ್ಳುವಂಥ ಜಾಣ ಮಾತುಗಾರರು ಕಾಣುತ್ತಿದ್ದಾರೆಯೇ ವಿನಾ ಕೃತಿನಿಷ್ಠವಾಗಿ ಒಂದು ಕೃತಿಯ ಬೆಲೆಗಟ್ಟುವ ಕೆಲಸ ನಡೆಯುತ್ತಿಲ್ಲ. ನಿಮ್ಮ ಜೊತೆಗೆ ಗಂಭೀರವಾಗಿ ಚರ್ಚಿಸಬಲ್ಲ ವಿಮರ್ಶೆಯ ವಾತಾವರಣವೇ ಈಗ ಇಲ್ಲ. ಮುಖ್ಯವಾಗಿ ನಾನು ಕವಿ ಎಂದುಕೊಂಡಿದ್ದೇನೆ. ಕವಿಯಾಗಿಯೇ ಮುಂದುವರೆಯುವ ಹಠ ತೊಟ್ಟಿದ್ದೇನೆ.

*** ಕವಿಗಳಾಗಿ ನಿಮ್ಮ ಮೇಲೆ ದಟ್ಟ ಪ್ರಭಾವ ಬೀರಿರುವವರು ಯಾರು ಯಾರು?**

– ನನ್ನ ಮಟ್ಟಿಗೆ ಇಬ್ಬರೇ – ಬೇಂದ್ರೆ ಮತ್ತು ಅಡಿಗ. ಪರವಶತೆಗೆ ಒಯ್ಯುವುದು, ತನ್ಮಯತೆಗೆ ತುಯ್ಯುವುದು ಬೇಂದ್ರೆ ಕಾವ್ಯದ ಗುಣಗಳು. ಭಾವಾತಿರೇಕದ ಸೋಂಕಿಲ್ಲದ ಭಾವಗೀತಾತ್ಮಕತೆ, ನಾದಮಯತೆ– ಈ ಎಲ್ಲ ಕಾವ್ಯಗುಣಗಳಿಗಾಗಿ ಬೇಂದ್ರೆ ನನ್ನ ಮೇಲೆ ಬೀರುವ ಪ್ರಭಾವ ಅಪಾರ. ದ್ವಂದ್ವಗಳನ್ನು ಸಮತೋಲಕ್ಕೆ ತಂದುಕೊಳ್ಳುವುದು ಅಡಿಗರ ಕಾವ್ಯದಿಂದಲೇ ಕಲಿಯಬೇಕಾದ ಗುಣ. ಧೈರ್ಯ ಹಾಗೂ ಪ್ರಯೋಗಪ್ರಿಯತೆಯನ್ನು ಕೂಡ ಅಡಿಗರಿಂದಲೇ ಕಲಿಯಬೇಕು.

*** ನಿಮ್ಮನ್ನು ಕೆಲವರು ವೈದಿಕ ಕವಿ ಅನ್ನಬಹುದು.**

– ಇದರ ವಿಸ್ತೃತ ಚರ್ಚೆ ಸದ್ಯಕ್ಕೆ ಬೇಡ. ಆದರೆ ನನ್ನನ್ನು ಯಾರಾದರೂ

ವೈದಿಕ ಕವಿ ಎಂದು ಕರೆದರೆ ನನಗೆ ಹೆಮ್ಮೆ. ಅದೊಂದು ಪ್ರಶಸ್ತಿ ಎಂದೂ ತಿಳಿಯುತ್ತೇನೆ. ನನ್ನ 'ದಾಂಪತ್ಯಗೀತ'ವನ್ನು ವಿಮರ್ಶೆ ಮಾಡುವವರು ವೇದ-ಉಪನಿಷತ್ತುಗಳನ್ನು ಸರಿಯಾಗಿ ಓದದಿದ್ದರೆ ಅವರನ್ನು ನನ್ನ ಕಾವ್ಯದ ವಿಮರ್ಶಕರು ಎಂದು ಹೇಳಲಾರೆ.

*** ದೈವ, ಕರ್ಮ ಸಿದ್ಧಾಂತ, ಪುರಾಣಶ್ರದ್ಧೆ ಇವುಗಳ ಬಗ್ಗೆ ನಿಮ್ಮ ನಿಲುವು?**

– (ಈ ಪ್ರಶ್ನೆಗೆ ಉತ್ತರವಾಗಿ ನಾಡಿಗರು ತಮ್ಮ 'ದಾಂಪತ್ಯಗೀತ'ದ ಸಾಲೊಂದನ್ನು ಉದ್ಧರಿಸಿದರು. ಅದು–) "ಬುದ್ಧಿ, ತರ್ಕ, ಪ್ರಮಾಣ, ಆಲೋಚನೆಯ ಆಚೆ ಬೇರೆ ತಿಳಿವಿನ ದಾರಿ ಇದೆ ಎನ್ನಿಸಿತು.'

*** ಸಾಹಿತ್ಯದಲ್ಲಿ, ಸಾಹಿತ್ಯ ವಿಮರ್ಶೆಯಲ್ಲಿ ದಲಿತ ಬಂಡಾಯ ನವ್ಯ ನವ್ಯೋತ್ತರ ಇತ್ಯಾಡಿ ಗಡಿ ನಿರ್ಣಯಿಸುವ ರೀತಿಯ ಪ್ರಭೇದಗಳು ಕಾಣಿಸಿಕೊಂಡಿರುವುದು ಆರೋಗ್ಯಕರ ಬೆಳವಣಿಗೆಯೇ?**

– ಇಂಥ ಪಂಥಗಳು ಎಲ್ಲ ಭಾಷೆಗಳಲ್ಲೂ ಆದದ್ದೇ. ಜಾತಿಯ ಬೇರುಗಳು ಆಳಕ್ಕಿಳಿದಿರುವ ನಮ್ಮ ಭಾರತೀಯ–ಕನ್ನಡದ ಸಂದರ್ಭದಲ್ಲಂತೂ ಇದು ಅನಿವಾರ್ಯವೇ ಆಗಿದೆ. ಲಕ್ಷಿಸುವಂಥದ್ದು ನಿರ್ಮಾಣವಾಗುವುದಾದರೆ ಇನ್ನೂ ಹತ್ತು ಪಂಥಗಳು ಹುಟ್ಟಿಕೊಳ್ಳಲಿ ಬಿಡಿ. ದೇವನೂರು ಮಹಾದೇವ, (ಕವಿ) ಸಿದ್ಧಲಿಂಗಯ್ಯರಂಥವರು ಉದಯಿಸುತ್ತಾರಾದರೆ ಅವರನ್ನು ಎಲ್ಲ ಪಂಥಗಳವರೂ ಒಪ್ಪುತ್ತಾರೆ.

*** ಹಾಡಲು ಬಾರದ ಭಾವಗೀತೆಗಳು ಎಂದೇನೋ ಎಂದಂತಿತ್ತು ನೀವು?**

– ಹೌದು. ಹಾಡಲು ಬಾರದ ಭಾವಗೀತೆ ಎಂಬುದೂ ಒಂದಿದೆ. 'ನಟರಾಜ ಕಂಡ ಕಾಮನಬಿಲ್ಲು' ಎನ್ನುವ ನನ್ನ ಕವನಸಂಗ್ರಹದಲ್ಲಿ ಹಾಡಲು ಬಾರದ ಭಾವಗೀತೆಗಳಿವೆ.

*** ಕಾವ್ಯದ ಉದ್ದೇಶದ ಬಗೆಗೆ ನಿಮ್ಮ ನಿಲುವು?**

– ಕಾವ್ಯ ಅಂತರಂಗದ ಭೂಪಟ ಎಂದು ನನ್ನ ತಿಳಿವು. ಅಂತರಂಗ ಎಂಬ ಕಪ್ಪುಖಂಡದ ಮೇಲೆ ಬೆಳಕು ಹಾಯಿಸುವುದು ಕಾವ್ಯದ ಉದ್ದೇಶವಾಗಬೇಕು.

*** ನಿಮ್ಮ ಜೀವನದೃಷ್ಟಿ ಹೇಗೆ?**

– ('ದಾಂಪತ್ಯಗೀತ'ದಿಂದ ನಾಡಿಗ್ ಕೆಳಕಂಡ ಸಾಲುಗಳನ್ನು ಓದಿದರು)

'ಕೊಳ್ಳುವುದಕ್ಕಿಂತಲೂ ಕೊಡುವ ಶಕ್ತಿಯು
ಮಾತ್ರ ಪ್ರತಿಯೊಂದು ಜೀವಿಗೂ ಹೆಚ್ಚುತಿರಲಿ' 

# ನಾಡಿಗರ 'ಪಂಚಭೂತಗಳು'

✍... ಡಾ|| ಜಿ.ಎಂ. ಹೆಗಡೆ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕವಿ, ವಿಮರ್ಶಕರಾಗಿರುವ ಡಾ. ಸುಮತೀಂದ್ರ ನಾಡಿಗರು ಬರೆದ ಹೊಸ ಕವಿತಾ ಸಂಕಲನ 'ಪಂಚಭೂತಗಳು' ಇದೀಗ ಪ್ರಕಟವಾಗಿದೆ. ಬೇಂದ್ರೆ, ಅಡಿಗರ ಪ್ರಭಾವದಲ್ಲಿ ಬೆಳೆದ ಸುಮತೀಂದ್ರ ನಾಡಿಗರು ಕಾವ್ಯದ ಮೂಲಕ ಹೊಸ ಸಂವೇದನೆ ಸಾಧ್ಯತೆಗಳನ್ನು ಅನ್ವೇಷಿಸುವ ಮನೋಧರ್ಮದವರು. ಕಾವ್ಯ ಭಾವಸಂವಾದವಾಗಿದ್ದು, ಸೃಷ್ಟಿಯ ರಹಸ್ಯವನ್ನು ಕಂಡುಕೊಳ್ಳುವ ಜೀವಸೆಲೆಯಾಗಿದೆ. ಕಾವ್ಯವನ್ನು ಸಾಮಾನ್ಯರಿಗೆ ತಲುಪಿಸುವಂತೆ ಮಾಡುವುದು ಇವತ್ತಿನ ಕವಿಗಳ ಮುಖ್ಯ ಕಾಳಜಿಯಾಗಿದೆ. ಕವಿತೆಯ ಗಂಧವಿಲ್ಲದೆ ಜೀವಿಸುವ ಜನರೂ ಇದ್ದಾರೆ. ಕವಿತೆ ನೀಡುವ ಸಂತೋಷ, ಸಂದೇಶವನ್ನು ಇತರ ಮಾಧ್ಯಮಗಳ ಜೊತೆಗೆ ತೂಗಿ ನೋಡಲಾಗದಿದ್ದರೂ ಕವಿತೆಯ ಆಕರ್ಷಣೆ ಕಡಿಮೆಯಾಗಿದೆ ಎಂದು ಹೇಳುವಂತಿಲ್ಲ. ವೇದ, ಉಪನಿಷತ್ತು ಪಂಡಿತರ ಸೊತ್ತಾಗಿ ಉಳಿದಾಗ ಅದರಲ್ಲಿಯ ಸಾರತತ್ವಗಳನ್ನು ಶ್ರೀಸಾಮಾನ್ಯನಿಗೆ ತಲುಪಿಸುವ ಮಾರ್ಗ ಎಂದಿಗಿಂತ ಇಂದು ಬಹಳ ಅವಶ್ಯಕವಾಗಿದೆ. ಸುಮತೀಂದ್ರ ನಾಡಿಗರ **'ಪಂಚಭೂತಗಳು'**ದಲ್ಲಿ ವೇದೋಪನಿಷತ್ತುಗಳು, ಸ್ಮೃತಿಗಳು, ಗೃಹ್ಯ ಸೂತ್ರಗಳು, ಶಾಸ್ತ್ರಗಳಲ್ಲಿ ಹೇಳಿರುವ ವೈಚಾರಿಕ ದೃಷ್ಟಿಕೋನ ಮತ್ತು ಸೃಷ್ಟಿಯ ಮೂಲ ರಹಸ್ಯಗಳ ಕುರಿತಾದ ಚಿಂತನಧಾರೆಯ ವಿವೇಚನೆ, ಸೃಜನಶೀಲ ಅನುಭವವಾಗಿ ಮೂಡಿಬಂದಿದೆ. ಮುಖ್ಯವಾಗಿ ನೆಲ, ಜಲ, ಅಗ್ನಿ, ವಾಯು, ಆಕಾಶಗಳೆಂಬ ಪಂಚಭೂತಗಳ ಕುರಿತಾದ ಕವಿ ಸಂವೇದನೆ ಪಂಚಭೂತೋಪನಿಷತ್ತಾಗಿ ಇಲ್ಲಿ ಆಕೃತಿ ಪಡೆದಿದೆ.

ಕಾವ್ಯವೆಂದರೇನು?

**ಅಂತರಂಗದ ಸ್ಪರ್ಶ**
**ರುಚಿ ವರ್ಣಗಳ ಜಲತರಂಗ**
**ಪಂಚೇಂದ್ರಿಯಗಳ ಪುಳಕ**
**ಮಹಾದ್ಭುತವ ಮುಟ್ಟಿಸಿಕೊಂಡ ಮೈಮರೆವು**
**ಎಂಥವಯ್ಯ ಇವು ಪಂಚಭೂತಗಳು!**
**ಭೂಮ್ಯಂತರಿಕ್ಷಗಳ ವ್ಯಾಪಿಸಿದವು**
**ಅಸಂಖ್ಯ ಜೀವರಾಶಿಗಳಾಗಿ ಕಾಣಿಸಿದವು**

ಎಂದು ಕಾವ್ಯಾರಂಭ ಮಾಡಿದ ಕವಿ ನಾಡಿಗರು ನಾಂದಿ, ಸೃಷ್ಟಿ ಪುರಾಣ, ಪ್ರಾರ್ಥನೆಗಳು, ಆನಂದವಲ್ಲಿ, ಗೃಹಸೂತ್ರ ಎಂಬ ಆರು ಮಂಡಲಗಳಲ್ಲಿ ಪಂಚಭೂತ ಕಾವ್ಯ ಸೃಷ್ಟಿ ಮಾಡಿದ್ದಾರೆ. ಋಗ್ವೇದದಲ್ಲಿರುವ ಹತ್ತು ಮಂಡಲಗಳು ಇಲ್ಲಿ ಇರಬೇಕಿತ್ತು. ಆದರೆ ನಾಡಿಗರು ಆರುಮಂಡಲಗಳಲ್ಲಿ ಎಲ್ಲವನ್ನೂ ಹೇಳಿ ಮುಗಿಸಿದ್ದಾರೆ. ವೇದೋಪನಿಷತ್ತಿನ ವಿಚಾರದೊಂದಿಗೆ ಕವಿ ಆಧುನಿಕ ವಿಜ್ಞಾನಯುಗದ ಬೆಳಕಿನಲ್ಲಿ

ಅನುಭವವನ್ನು ಒರೆಗೆ ಹಚ್ಚುತ್ತಾರೆ. ಆರಂಭದಲ್ಲಿಯೇ ತೆಂಗಿನಮರ ಅನುಭವದ ಶೋಧಕ್ಕೆ ಪ್ರತೀಕವಾಗುತ್ತದೆ. ನಿನ್ನಂತೆ ಜೀವನದುದ್ದ ಕೊಡುವುದೇ ಆಗಿದ್ದರೆ, ನಿನ್ನಂತೆ ತಲೆಯೆತ್ತಿ ನಿಲ್ಲುವುದು ಸಾಧ್ಯವಿದ್ದಿದ್ದರೆ, ನಿನ್ನಂತೆ ಬಿರುಗಾಳಿ ತಡೆದುಕೊಳ್ಳುವ ಶಕ್ತಿ ಪಡೆದಿದ್ದರೆ ಎಂದು ಹಂಬಲಿಸುವ ಕವಿ ಕಾವ್ಯದ ಫಲ ನೀಡಲು ಸನ್ನದ್ಧನಾಗುತ್ತಾನೆ. ಸೃಷ್ಟಿಪುರಾಣದಲ್ಲಿ ನಿಸರ್ಗದರ್ಶನದ ಅನಂತ ರೂಪವಿದೆ. ಪ್ರಕೃತಿ ಜಡವಲ್ಲ, ಅದು ಚೇತನದ ಲೀಲೆ. ಪ್ರಕತಿಯ ಒಡಲಲ್ಲಿ ಮಾನವ ಸಂಬಂಧ ಗಾಢವಾಗಿ ಬೆಸೆದ ಭಾವವಿದೆ. ಪಂಚಭೂತಗಳಲ್ಲಿ ಕವಿಯ ಪ್ರಾರ್ಥನೆ ಮಾನವ ಕುಲದ ಉತ್ಥಾನವನ್ನು ಸ್ಥಾಪಿಸುವುದಾಗಿದೆ. ಯುದ್ಧಗಳಿಲ್ಲದ ವಿಶ್ವಶಾಂತಿಯನ್ನು ನೆಲೆಗೊಳಿಸುವುದಾಗಿದೆ. ಆನಂದವಲ್ಲಿಯ ಚತುರ್ಥ ಮಂಡಲದಲ್ಲಿ ಮಳೆ, ಗಾಳಿ, ಬೆಂಕಿಯ ಸಂವಾದವಿದೆ. ಪಂಚಭೂತ ಕಾವ್ಯದ ಆಕರ್ಷಣೆ ಇರುವುದು ಗೃಹ್ಯಸೂತ್ರಗಳಲ್ಲಿ. ದಾಂಪತ್ಯ, ನವವಧುವಿಗೆ ಕಾಮಸೂತ್ರ, ಪತಿಪೂಜೆ, ಪತ್ನಿಪೂಜೆ, ದಂಪತಿಗಳಿಗೆ, ಅವರು ತಂದೆ ತಾಯಿಗಳಾದಾಗ, ಅವನು ಅವಳಿಗೆ ಅವಳು ಅವನಿಗೆ ಹೀಗೆ ಹದಿಮೂರು ಭಾಗಗಳ ಐದನೆಯ ಮಂಡಲದ ಕಾವ್ಯಭಾಗ ತುಂಬ ರಸವತ್ತಾಗಿದೆ. ಇದನು ದಾಂಪತ್ಯಗೀತವೆಂದೇ ಕರೆಯಬೇಕು. ಪಂಚಭೂತಗಳಂತೆ ಗಂಡು ಹೆಣ್ಣಿನ ಸಂಬಂಧ ಪ್ರೇಮಲೀಲೆಯ ಉಪದೇಶ ಕವಿಯ ಜೀವನಾನುಭವದ ಪ್ರತೀಕವಾಗುತ್ತದೆ. ಈ ಜಗತ್ತು ಹುಟ್ಟಿದ್ದು ಆನಂದದಿಂದ, ಆನಂದದಿಂದ ಪ್ರಾಣಿಗಳು ಬದುಕುತ್ತವೆ. ಪತಿ ಪತ್ನಿಯರ ಪ್ರೇಮಾನಂದ ಲಹರಿಯ ಗೃಹ್ಯಸೂತ್ರಗಳನ್ನೂ ಕಾಮಸೂತ್ರಗಳನ್ನೂ ನಾಡಿಗರು ಆರದ ಆಸಕ್ತಿಯಿಂದ ವರ್ಣಿಸುತ್ತಾರೆ. ಕವಿಕಂಡ ಪ್ರೇಮದರ್ಶನ ಮನೋಜ್ಞವಾಗಿದೆ. ಕಾಮಸೂತ್ರದಂತೆ ಪ್ರೇಮಿಗಳಿಗೆ ಕವಿತೆ ಉಪದೇಶಾತ್ಮಕವೂ ಆಗಿ ಅಪ್ಯಾಯಮಾನವಾಗಿದೆ. ಪ್ರೇಮಿಗಳ ಭಾಗ ರಾಗಗಳನ್ನೂ, ಪಂಚಭೂತಗಳಂತೆ ಅನುಭವದ ಜೀವದ್ರವ್ಯವಾಗಿಸುವ ಗೃಹ್ಯಸೂತ್ರದ ಕಾವ್ಯ ಪಂಕ್ತಿಗಳು ಯುವಕ ಯುವತಿಯರನ್ನು ಆಕರ್ಷಿಸುತ್ತವೆ. ಜೀವಜಾಲದ ಅನಂತಪ್ರಣಯವನ್ನು ವರ್ಣಿಸುವ ನಾಡಿಗರ ಕವಿತೆಯ ಸಾಲುಗಳು ಓದುಗರನ್ನು ಮುದಗೊಳಿಸುತ್ತವೆ.

ಅರಣ್ಯವೆಂಬ ಆರನೆಯ ಮಂಡಲದಲ್ಲಿ ಕವಿ ವಾಸ್ತವ ಬದುಕಿನ ನೋವನ್ನು ಚಿಂತಿಸುವಂತೆ ಮಾಡುತ್ತಾರೆ. ಮೃತ್ಯು, ವೃದ್ಧಾಪ್ಯ, ನಗರಗಳು, ಬದುಕಿನ ಸ್ಥಿತಿಗತಿಯ ನೋವಿನ ಅನುಭವವನ್ನು ತೆರೆದಿಟ್ಟಿದ್ದಾರೆ. ವೃದ್ಧಾಪ್ಯ ಎಲ್ಲ ಜೀವರುಗಳಿಗೆ ಈ ವಿಷಾದದ ಯೋಗ ಅನಿವಾರ್ಯ. ಈ ಜಗದ ಸೌಂದರ್ಯ ಅದರ ಅಸ್ತಿತ್ವ ಭಯಂಕರವಾದದ್ದು. ಪ್ರತಿಯೊಬ್ಬ ಯೌವನೆಯು ಭಯಂಕರವಾದ ಅಸ್ತಿತ್ವವುಳ್ಳವಳು ಹಣ್ಣೆಲೆಯ ತಿರಸ್ಕರಿಸಿ ಚಿಗುರು ನಗುತ್ತಾಳೆ ಎಂದು ಹೇಳುವ ಕವಿ ಮೃತ್ಯುವನ್ನು ಸ್ವೀಕರಿಸಲು ಸನ್ನದ್ಧರಾಗುವುದಕ್ಕೆ ಕರೆ ಕೊಡುತ್ತಾರೆ. ಪಂಚಭೂತಗಳಲ್ಲಿ ಲೀನವಾಗುವ ಜೀವಿಯೊಡನೆ ಕವಿ ತನ್ನ ಅಳಲನ್ನು ಪ್ರಕಟಿಸುತ್ತಾನೆ. ಗಂಡುಹೆಣ್ಣಿನ ಭಾವ ಸಂವಾದವನ್ನು ಸದಾ ಉಲ್ಲಾಸಕಾರಿಯಾಗಿ ವಿದಿತಪಡಿಸುವ ಪಂಚಭೂತಗಳು ತುಂಬ ಆಕರ್ಷಕವಾಗಿದೆ. ನಾಡಿಗರ ಉಪದೇಶಾಮೃತದ ಈ ಕಾವ್ಯ ದಾಂಪತ್ಯಪ್ರೇಮದ ಜೀವಲಹರಿಯಾಗಿದೆ.

# ನಾಡಿಗರ ಗದ್ಯ – ಕೆಲವು ನುಡಿಕಿಡಿಗಳು

## ಕವಿಗಳು:

ಕವಿಗಳೂ ಮನುಷ್ಯರೇ, ದೇವತೆಗಳಲ್ಲ. ಆದರೆ ಅವರು ವಾಗ್ದೇವಿಯ ಭಕ್ತರಾದ್ದರಿಂದ ಆಕೆ ಅವರನ್ನು ಮಾನವತೆಯ ಕೇಂದ್ರಕ್ಕೆ ಕರೆದೊಯ್ಯುತ್ತಾಳೆ. ಯಾವಾಗಲೋ ಒಮ್ಮೆ ಸೃಷ್ಟಿಮೂಲವಾದ ಅದ್ಭುತ ಶಕ್ತಿಯ ಎದುರಿಗೆ ನಿಲ್ಲಿಸುತ್ತಾಳೆ. ಕವಿಯ ಮೂಲಕ ಸಹೃದಯರಿಗೂ ಅಂತಹ ಅನುಭವ ಲಭ್ಯವಾಗುತ್ತದೆ. ಕವಿಗಳ ದೌರ್ಬಲ್ಯವನ್ನು ಕುರಿತು ಪಟ್ಟಾಂಗ ಹೊಡೆಯುವುದಕ್ಕಿಂತ ಅವರ ಶಕ್ತಿಯನ್ನು ಗುರುತಿಸುವುದು ಪ್ರಯೋಜನಕಾರಿ.

## ಬುದ್ಧಿಜೀವಿಗಳು:

ಬುದ್ಧಿಜೀವಿಗಳೆಂದರೆ ನಾಚಿಕೆ, ಮಾನ, ಮರ್ಯಾದೆ ಬಿಟ್ಟು ಗೆದ್ದ ಎತ್ತಿನ ಬಾಲ ಹಿಡಿಯುವವರು. ಭಾರತೀಯ ಧರ್ಮ ಮತ್ತು ಸಂಸ್ಕೃತಿ ಎಂದರೇನೆಂದು ಗೊತ್ತಿಲ್ಲದವರು. ಹಿಂದೂ ಧರ್ಮವನ್ನು ಅವಹೇಳನ ಮಾಡುವವರು – ಎಂಬ ಅರ್ಥ ಬೇರೂರಿದೆ. ಇಂಥವರು ಪದೇ ಪದೇ ಮಾಧ್ಯಮದಲ್ಲಿ ಕಾಣಿಸಿಕೊಂಡು ತಮಗೆ ಕೋಮುವಾದಿಗಳನ್ನು ಕಂಡರಾಗುವುದಿಲ್ಲವೆಂದು ಸಂದೇಶ ನೀಡುತ್ತಾ ಕೆಲ ರಾಷ್ಟ್ರನಾಯಕರ ಕೃಪೆಗಾಗಿ ಕಾಯುತ್ತಿರುತ್ತಾರೆ. ವಚನಭ್ರಷ್ಟ, ಮಿತ್ರದ್ರೋಹಿ, ಜಾತ್ಯಾತೀತ ರಾಜಕಾರಣಿಗಳು ಕೆಲ ಬುದ್ಧಿಜೀವಿಗಳನ್ನು ಸಾಕುತ್ತಾರೆ. ಈ ಬುದ್ಧಿಜೀವಿಗಳು ವಚನಭ್ರಷ್ಟತೆಯನ್ನೂ, ಮಿತ್ರದ್ರೋಹವನ್ನೂ ಒಂದಲ್ಲ ಒಂದು ಕಾರಣ ಕೊಟ್ಟು ಸಮರ್ಥಿಸುತ್ತಾರೆ.

## ಮಾನವ:

ಮಾನವ ಎನ್ನುವುದೊಂದು ಸಾಧಾರಣೀಕೃತ ಅಮೂರ್ತ ಕಲ್ಪನೆ. ಆ ಕಲ್ಪನೆ ನಮ್ಮ ಮನಸ್ಸಿನಲ್ಲಿ ಮತ್ತು ಪುಸ್ತಕಗಳಲ್ಲಿರುತ್ತೆ. ಮಾನವರು ಜಗತ್ತಿನಲ್ಲಿ ಎಲ್ಲಿಯೂ ಇರುವುದಿಲ್ಲ. ವ್ಯಕ್ತಿಗಳು ಮಾತ್ರ ಇರುತ್ತಾರೆ. ವ್ಯಕ್ತಿ ಕಾಣಿಸುತ್ತಾನೆ, ಓಡಾಡುತ್ತಾನೆ, ಪ್ರೀತಿಸುತ್ತಾನೆ, ನೋಯುತ್ತಾನೆ, ಜಗಳವಾಡುತ್ತಾನೆ, ಹೊಡೆದಾಡುತ್ತಾನೆ, ಸಾಯುತ್ತಾನೆ.

## ದಾಂಪತ್ಯ:

ದಾಂಪತ್ಯದಲ್ಲಿ ಸ್ವರ್ಗ, ನರಕ ಎರಡೂ ಇರುತ್ತವೆ. ಗಂಡ ಹೆಂಡಿರಿಬ್ಬರೂ ಮನಸ್ಸು ಮಾಡಿದರೆ ಸ್ವರ್ಗದ ಪಾಲನ್ನು ಹೆಚ್ಚು ಮಾಡುತ್ತ ನರಕದ ಭಾಗವನ್ನು

ಕಡಿಮೆ ಮಾಡಬಹುದು. ಆದರೆ ನರಕದ ಅಂಶವನ್ನು ಪೂರ್ತಿಯಾಗಿ ತೆಗೆದು ಹಾಕುವುದಕ್ಕಾಗುವುದಿಲ್ಲ ' ಎನ್ನುವುದನ್ನು ಸ್ತ್ರೀಪುರುಷರಿಬ್ಬರೂ ಮನದಟ್ಟು ಮಾಡಿಕೊಳ್ಳಬೇಕು.

**ಸಣ್ಣಕತೆ:**

ಸಣ್ಣಕತೆಯನ್ನು ಬರೆಯುವ ಲೇಖಕರಿಗೆ ಮನರಂಜನೆಯನ್ನು ಕೊಡುವುದರ ಜೊತೆಗೆ ಓದುಗರಿಗೆ ಮಾರ್ಗದರ್ಶನ ಮಾಡುವ ಜೀವನವಿಮರ್ಶಕನ ಜವಾಬ್ದಾರಿಯೂ ಇರುತ್ತದೆ. ಮನರಂಜನೆ ಉತ್ತಮ ಅಭಿರುಚಿಯನ್ನು ಬೆಳೆಸಬೇಕು ಮತ್ತು ಮಾರ್ಗದರ್ಶನ ದೇಶದ ಹಿತದೃಷ್ಟಿಯಿಂದ ಸಾಮಾಜಿಕ ಸುಭದ್ರತೆಯನ್ನು ಗಮನದಲ್ಲಿಟ್ಟುಕೊಂಡಿರಬೇಕು.

**ಹಿಂದೂಧರ್ಮ:**

ನಾವು ಹಿಂದೂಗಳು ಅಂತ ಕರೆದುಕೊಳ್ಳುವುದಕ್ಕೆ ನಾಚಿಕೊಳ್ಳಬೇಕಾಗಿಲ್ಲ. ಈಗಿನ ಪ್ರಚಲಿತ ಭಾಷೆಯಲ್ಲಿ ನಾವು ಯಾವುದನ್ನು ಹಿಂದೂಧರ್ಮ ಎಂದು ಕರೆಯುತ್ತೇವೆಯೋ, ಆ ಸನಾತನ ಧರ್ಮವನ್ನು ಉಳಿಸಿಕೊಳ್ಳಬೇಕು. ಹಾಗೆ ಉಳಿಸಿಕೊಳ್ಳಬೇಕಾದರೆ ನಮ್ಮ ಸಂಸ್ಕೃತಿಯಲ್ಲಿ ಅತ್ಯುತ್ತಮವಾದದ್ದನ್ನು ಉಳಿಸಿಕೊಳ್ಳಬೇಕು. ಸಂಸ್ಕೃತವನ್ನು ಉಳಿಸಿಕೊಳ್ಳಬೇಕು.

**ಸಾಹಿತ್ಯದ ತಪಸ್ಸು:**

ಗಾಢವಾದ ಪ್ರಾಮಾಣಿಕ ಮನಸ್ಥಿತಿಯನ್ನು ಪಡೆದು ಬರೆಯಲಿಕ್ಕೆ ತಪಸ್ಸು ಬೇಕು. ನಿರಂಕುಶ ಪ್ರತಿಭೆಯನ್ನು ವ್ಯುತ್ಪತ್ತಿಯ ಕೈಗೆ ಒಪ್ಪಿಸಿ, ಪ್ರಜ್ಞೆಯ ಬೆಳಕಿನಲ್ಲಿ ನಿಂತು ಅಗ್ನಿದೇವರು ತನ್ನ ಮೂಲಕ ಹಾದು ಹೋಗುವುದಕ್ಕೆ ಬಿಡುವ ಅಗಾಧವಾದ ಧಾರ್ಮಿಕತೆ ಕಲಾಗಾರನಲ್ಲಿರಬೇಕು. ಕಲೆಗೆ ಮತ್ತು ಜೀವನಕ್ಕೆ, ಸತ್ಯ ಮತ್ತು ಸೌಂದರ್ಯಕ್ಕೆ ಬೇರ್ಪಡಿಸಲಾರದ ನಿಷ್ಠೆ ಇರುವವನು ಮಾತ್ರ ಶ್ರೇಷ್ಠ ಕಾದಂಬರಿಯನ್ನು ಬರೆಯಬಲ್ಲ.

**ದೊಡ್ಡ ವ್ಯಕ್ತಿ:**

ದೊಡ್ಡವ್ಯಕ್ತಿಗಳಲ್ಲಿ ಒಂದು ಮಗು, ಬಾಲಕ, ಯುವಕ, ಪ್ರೌಢ, ತಂದೆ ಮತ್ತು ಸಂತ ಎನ್ನುವ ಆರು ಸ್ತರಗಳಿರುತ್ತವೆ. ಕ್ರಿಯಾಶೀಲ ಗಳಿಗೆಗಳಲ್ಲಿ ಒಬ್ಬ ದೊಡ್ಡ ಲೇಖಕನಲ್ಲಿ ಆರೂ ಸ್ತರಗಳಿಂದ ನೋಡುವ ಪ್ರತಿಭೆ ಕೆಲಸ ಮಾಡುತ್ತದೆ. ■

(ನಾಡಿಗರ ವಿವಿಧ ಬರಹಗಳಿಂದ ಆಯ್ದ ವಿಚಾರಗಳು)

# ನಾಡಿಗರ ಗುರುತರ ಕಾವ್ಯಾಭ್ಯಾಸ

✍... ಎಂ. ಜಯರಾಮ ಅಡಿಗ




ಬೇಂದ್ರೆ-ಅಡಿಗ-ನಾಡಿಗ: ಇದು ನಾಡಿಗರೇ ರಚಿಸಿಕೊಂಡ ಒಂದು ಕಾವ್ಯ ತ್ರಿಕೋನ.

**'ಬೇಂದ್ರೆ ಮತ್ತು ಅಡಿಗರ ಕಾವ್ಯ'** – ಈ ಹೆಸರಿನ ತಮ್ಮ ಸಂಯುಕ್ತ ಕಾವ್ಯ ಅಧ್ಯಯನ ಕೃತಿಯ ಬಗ್ಗೆ ನಾಡಿಗರದ್ದೇ ಒಂದು ವಿವರಣೆ ಉಂಟು. "ಅಡಿಗರ ಕಾವ್ಯದ ನನ್ನ ಅಭ್ಯಾಸ ಮೊದಲು ಬಂತು. ಆಮೇಲೆ ಬೇಂದ್ರೆಯವರ ಕಾವ್ಯದ ಅಧ್ಯಯನ. ಸಂಯುಕ್ತ ಸಂಪುಟಕ್ಕೆ 'ಅಡಿಗರು ಮತ್ತು ಬೇಂದ್ರೆಯವರ ಕಾವ್ಯ' ಅಂತ ಹೇಳುವುದು ಉಚ್ಚಾರಣೆಯ ದೃಷ್ಟಿಯಿಂದ ಹಿತವೆನಿಸಿತು; ಬೇಂದ್ರೆಯವರು ಅಡಿಗರಿಗೆ ಗುರುಗಳ 'ಲ್ಲೊಬ್ಬರಾದ್ದರಿಂದ ಅವರ ಹೆಸರನ್ನು ಮೊದಲು ಹೇಳುವುದು. ಸಮರ್ಪಕ ಎನಿಸಿತು" ಎಂದು ಸರಳ ವಿವರಣೆ ನೀಡಿದ್ದಾರೆ.

ಆದರೆ ವಿಷಯ ಅಷ್ಟು ಸರಳ ಅಲ್ಲ. ನಾಡಿಗರು ಮೊದಲು **'ಅಡಿಗರು ಮತ್ತು ನವ್ಯಕಾವ್ಯ'** ಪುಸ್ತಕ ಬರೆದರು. ಅದರ ಪರಿಷ್ಕೃತ ಮೂರನೆ ಆವೃತ್ತಿ ಪ್ರಕಟಿಸುವ ಮೊದಲೇ **'ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು'** ಬಂತು. ಅದರ ಪರಿಷ್ಕೃತ ಎರಡನೇ ಆವೃತ್ತಿಯೂ **'ಅಡಿಗರು ಮತ್ತು ನವ್ಯಕಾವ್ಯ'**ದ ಪರಿಷ್ಕೃತ ಮೂರನೇ ಆವೃತ್ತಿಯೂ ಒಂದೇ ಸಮಯದಕ್ಕಾದವು.

**'ಬೇಂದ್ರೆ ಮತ್ತು ಅಡಿಗರ ಕಾವ್ಯ'** ಸಂಯುಕ್ತ ಕೃತಿ ಪ್ರವೇಶಕ್ಕೆ ನಾಡಿಗರು ಹೀಗೆ ದಾರಿ ತೋರುತ್ತಾರೆ: "ಪುಸ್ತಕದ ಒಳಗೆ ಮೊದಲು ಅಡಿಗರ ಬಗ್ಗೆ ವಿಮರ್ಶೆ ಇದೆ; ಆಮೇಲೆ ಬೇಂದ್ರೆಯವರ ಬಗ್ಗೆ. ನನ್ನ ಕಾವ್ಯಕ್ಕೆ ಮೊದಲು ಅಡಿಗರು.

ಆಮೇಲೆ ಬೇಂದ್ರೆಯವರು ದಾರಿ ತೋರಿಸಿದ್ದರಿಂದ ನವ್ಯಕಾವ್ಯಕ್ಕೆ ಪೂರಕವಾಗಿ ನವೋದಯ ಕಾವ್ಯ ಆಮೇಲೆ ಕಾಣಿಸಿಕೊಂಡಿದ್ದರಿಂದ ಮೊದಲು ಅಡಿಗರ ಕಾವ್ಯದ ವಿಮರ್ಶೆಯನ್ನು ಕೊಟ್ಟಿದ್ದೇನೆ. ಬೇಂದ್ರೆಯವರ ಕಾವ್ಯದ ಅಭ್ಯಾಸದಿಂದ ನನ್ನ ಕಾವ್ಯ ನವ್ಯದ ಬಿಕ್ಕಟ್ಟಿನಿಂದ ಪಾರಾಗಲಿಕ್ಕೆ ಸಹಾಯ ಸಿಕ್ಕಿತು. ಆದ್ದರಿಂದ ನನ್ನ ಕಾವ್ಯದ ಅಭ್ಯಾಸಕ್ಕೆ ಮೊದಲು ಅಡಿಗರ ಅಧ್ಯಯನ, ಆಮೇಲೆ ಬೇಂದ್ರೆಯವರ ಅಧ್ಯಯನ ಉಪಯೋಗವಾಗುತ್ತದೆ ಅನ್ನಿಸಿದ್ದರಿಂದ ಇವರಿಬ್ಬರ ಕಾವ್ಯದ ಬಗ್ಗೆ ನನ್ನ ಅಧ್ಯಯನವನ್ನು ಕಾಲಾನುಕ್ರಮದಲ್ಲಿ ಇಟ್ಟಿದ್ದೇನೆ." ಅಂದರೆ ನಾಡಿಗರ ಪ್ರಕಾರ ಅವರ ಕಾವ್ಯವನ್ನು ಅಭ್ಯಾಸ ಮಾಡುವವರಿಗೆ ಅವರು ಅಡಿಗ, ಬೇಂದ್ರೆಯವರ ಕಾವ್ಯವನ್ನು ಅಧ್ಯಯನ ಮಾಡಿದ್ದನ್ನು ಅರಿಯುವುದರಿಂದ ಪ್ರಯೋಜನವಾಗುತ್ತದೆ.

ಅದೂ ಸರಿ. ಆದರೆ ಸಂಯುಕ್ತ ಕೃತಿಯಲ್ಲಿ ಮೊದಲು ಕಾಣಿಸುವುದು – **'ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು'** ಹೆಸರಿನ ಬೇಂದ್ರೆ ಕಾವ್ಯಾಧ್ಯಯನವೇ. ಅದಕ್ಕೆ ಸಂಬಂಧಪಟ್ಟ ಅನುಬಂಧ ಭಾಗವೂ ಮುಗಿದ ಬಳಿಕ **'ಅಡಿಗರು ಮತ್ತು ನವ್ಯಕಾವ್ಯ'** ಪ್ರಾರಂಭವಾಗುತ್ತದೆ. ಅಡಿಗರ ಕಾವ್ಯದ ತಮ್ಮ ಅಭ್ಯಾಸ ಮೂರು ಹಂತದಲ್ಲಾಯಿತೆಂದು ತಿಳಿಸುವ ನಾಡಿಗರು "ಆ ಮೂರು ಹಂತಗಳ ವಿಮರ್ಶೆಯ ಶೈಲಿಗಳಲ್ಲಿ ಮತ್ತು ಅಧ್ಯಯನ ಕ್ರಮಗಳಲ್ಲಿ ವ್ಯತ್ಯಾಸಗಳಾಗಿವೆ. ಈ ವ್ಯತ್ಯಾಸಗಳು ಅಭಿರುಚಿಯ ಸ್ಥಿತ್ಯಂತರಗಳನ್ನು ತೋರಿಸುತ್ತವೆ" ಎನ್ನುತ್ತಾರೆ. ಅಡಿಗರ ಕಾವ್ಯದ ತಮ್ಮ ಅಧ್ಯಯನ ಈಗಲೂ ಮುಂದುವರಿದಿದೆ; ಇನ್ನೊಂದು ಪುಸ್ತಕ ಬರೆಯುತ್ತೇನೆ. ಬೇಂದ್ರೆಯವರ ಕಾವ್ಯದ ಅಧ್ಯಯನವೂ ಮುಂದುವರೆದಿದೆ. ತಮ್ಮ ಸಮಕಾಲೀನ ವಿಮರ್ಶಕರು ಗಮನಿಸದೆ ಇರುವ ವಿಷಯಗಳನ್ನು ಕುರಿತು ಇನ್ನೊಂದು ಪುಸ್ತಕದಲ್ಲಿ ಬರೆಯುತ್ತೇನೆ ಎನ್ನುತ್ತಾರೆ. ಅಂದರೆ ನಾಡಿಗರಲ್ಲಿ ಕಾಲಾನುಕ್ರಮೇಣ ಅಡಿಗರು ಮತ್ತು ಬೇಂದ್ರೆಯವರ ಕಾವ್ಯದ ಗಾಢ ಅಭ್ಯಾಸ ಹಾಸುಹೊಕ್ಕಾಗಿ ಸಂಯುಕ್ತ ಹದ ಮೂಡಿತೇ? ಅನಂತರ ನಾಡಿಗರು ಕೆ.ಎಸ್.ನ. ಅವರ ಕಾವ್ಯಸುಧೆಯನ್ನು ತಲ್ಲೀನರಾಗಿ ಸವಿದು, ಗ್ರಂಥ ರಚಿಸಿದುದು ಇನ್ನೊಂದು ಹಂತ. ನಾಡಿಗರ ವಿವಿಧ ಹಂತದ ಕಾವ್ಯಾಭ್ಯಾಸ ಅವರ ಸ್ವಂತ ಕಾವ್ಯಮಾರ್ಗದ ನಿರಂತರ ಅನ್ವೇಷಣೆಯ ಅಂಗ ಎನ್ನಬಹುದೇನೋ. ಅವರು ಗುರುತ್ವವನ್ನು ಗುರುತಿಸುವವರು, ಗೌರವಿಸುವವರು. ಆದರೆ ಗುರುಮಾರ್ಗದಲ್ಲೇ ನಡೆಯುವ ಅನುಯಾಯಿ ಅಲ್ಲ. ತಾವು ಮುನ್ನಡೆದಂತೆ ಗುರು ತೋರಿದ ಮಾರ್ಗದ ಕಡೆಗೆ ತಿರುಗಿ ನೋಡದಿರುವ ಛಲ ತೊಟ್ಟವರೂ ಅಲ್ಲ. ಆದ್ದರಿಂದ ನಾಡಿಗರ ಕಾವ್ಯಾಭ್ಯಾಸ ಮತ್ತು ಅವರ ಕಾವ್ಯಪ್ರಯೋಗ ಗುರುತರವಾದುದು. ಅದರ ಮುಂದಿನ ದಾರಿ ಈಗ ಕುತೂಹಲದ ವಿಷಯವೂ ಹೌದು. ■

# ಕವನ
# ಸುಮತೀಂದ್ರ ನಾಡಿಗರಿಗೆ

✍... ಪಾ .ಚಂದ್ರಶೇಖರ ಚಡಗ

ಸುಮತೀಂದ್ರ
ಇಂದ್ರನಿಗೂ ಸುಮತಿ ಇತ್ತೇ?
ಆದರೆ
ಅಹಲ್ಯೆ ಏಕೆ ಕಲ್ಲಾದಳು?
ಸುಮತಿ
ಏಕೆ ಬೆಪ್ಪಾದಳು?
ಯಾಕೆ ಈಗ ಪ್ರಶ್ನೆ?
ಅವು ಶೇಷ ಪ್ರಶ್ನೆಯಾಗಿಯೇ ಇರಲಿ

ಮಲೆನಾಡಿನ ನಾಡಿಗರೂ
ನಮ್ಮ ನಾಡಿನ ಅಡಿಗರೂ
ಬಲುದೊಡ್ಡ ಕವಿಗಳು
ಅವರಡಿಗೆ ವಂದಿಸುವೆವು

ಅವರು ಧೂಮಲೀಲೆಯಲೂ
ಕಾಣುವರು ಖುಷಿ
ಪುಂಖಾನುಪುಂಖವಾಗಿ
ಅವರು ಮಾತನಾಡಿದಾಗ
ಪದ್ಯ ಓದಿದಾಗ
ಪಂಚಭೂತಗಳೂ
ಅಲುಗಾಡಿಯಾವು!
ಶಿವನಂತೆ
ಅಲೆಮಾರಿ ನಮ್ಮ ನಾಡಿಗರು, ಅಡಿಗರಂತೆ
ಕುಳಿತಲ್ಲಿ
ಕುಳಿತೇ ಇಲ್ಲ!
ಗಾಂಧಿ ಬಜಾರಿನಲೂ
ಈ ಗಾಂಧಿನಾಡಿನಲೂ
ಪುಸ್ತಕವ ಬರೆದರು
ಮಾರಿದರು!
ಆದರೂ ತನ್ನ ಬೊಕ್ಕಸವ
ತುಂಬಿಸಿಕೊಳ್ಳಲೇ ಇಲ್ಲ
ಈ ಕಲಿಯುಗದಲ್ಲೂ
ಇಂಥವರು ಇರುವರೇ?
ಇವರಿಗೆಂದು ಬರುವುದು ಪ್ರಶಸ್ತಿ?
ಬಂದಿಲ್ಲ ಅಂತಲ್ಲ.
ಬರಬೇಕಾದ್ದು ಬರಲಿಲ್ಲ ಅಷ್ಟೆ

(ಇತ್ತೀಚೆಗೆ ಬಿಡುಗಡೆಗೊಂಡ 'ಕಡಲತೀರದ ಭಾರ್ಗವ' ಕವನಸಂಕಲನದಿಂದ)

ವಯಸ್ಸಾಗುತ್ತಿದ್ದಂತೆ ನಮ್ಮ ಸುತ್ತ ಮುತ್ತಣ ಜಗತ್ತು ವಿಚಿತ್ರವಾಗಿಯೂ, ಅದರ ವಿನ್ಯಾಸಗಳು ಜಟಿಲವಾಗಿಯೂ ಕಾಣಿಸುತ್ತವೆ.

– ಟಿ.ಎಸ್. ಎಲಿಯಟ್

# ಸುಮತೀಂದ್ರ ನಾಡಿಗರ ಕೃತಿಗಳು

## ಕಾವ್ಯ:

1. ನಿಮ್ಮ ಪ್ರೇಮಕುಮಾರಿಯ ಜಾತಕ – 1964
2. ಕಪ್ಪು ದೇವತೆ – 1970
3. ಉದ್ಘಾಟನೆ – 1978
4. ಭಾವಲೋಕ – 1983
5. ದಾಂಪತ್ಯಗೀತ – 1987
6. ನಟರಾಜ ಕಂಡ ಕಾಮನಬಿಲ್ಲು – 1994
7. ಪಂಚಭೂತ – 2000
8. ಜಡ ಮತ್ತು ಚೇತನ – 2005

## ವಿಮರ್ಶೆ:

1. ಅಡಿಗರು ಮತ್ತು ನವ್ಯಕಾವ್ಯ – 1968
2. ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು – 1989
3. ವಿಮರ್ಶೆಯ ದಾರಿಯಲ್ಲಿ – 1994
4. ಕಾವ್ಯ ಎಂದರೇನು? – 1994
5. ಇನ್ನೊಂದು ಸಾಹಿತ್ಯ ಚರಿತ್ರೆ – 1999
6. ಮತ್ತೊಂದು ಸಾಹಿತ್ಯ ಚರಿತ್ರೆ – 2003
7. ನಾಲ್ಕನೆಯ ಸಾಹಿತ್ಯ ಚರಿತ್ರೆ – 2005
8. ಮೌನದಾಚೆಯ ಮಾತು – 2007
9. ಐದನೆಯ ಸಾಹಿತ್ಯ ಚರಿತ್ರೆ – 2008

## ಸಣ್ಣಕತೆಗಳು:

1. ಕಾರ್ಕೋಟಕ – 1975
2. ಗಿಳಿ ಮತ್ತು ದುಂಬಿ – 1985
3. ಸ್ಥಿತ ಪ್ರಜ್ಞ – 1996

## ಮಕ್ಕಳ ಸಾಹಿತ್ಯ:

1. ಸಾಹಸ (ಕಾದಂಬರಿ) – 1978
2. ಹನ್ನೊಂದು ಹಂಸಗಳು (ನಾಟಕ) – 1987

3. ಇಲಿ ಮತ್ತು ಮದುವೆ (ಕವಿತೆಗಳು) – 1999
4. ಗಾಳಿಪಟ (ಕವಿತೆಗಳು) – 1999
5. ಗೂಬೆಯ ಕತೆ (ಕತೆಗಳು) – 2000
6. ಧ್ರುವ ಮತ್ತು ಪ್ರಹ್ಲಾದ (ಕತೆಗಳು) – 2003
7. ಡಿಡಿಲಕ್ ಡಿಡಿಲಕ್ (2ರಿಂದ 6 ವರ್ಷದ ಮಕ್ಕಳಿಗೆ) – 2002
8. ಡಕ್ಕಣಕ್ಕ ಡಕ್ಕಣ (2ರಿಂದ 6 ವರ್ಷದ ಮಕ್ಕಳಿಗೆ) – 2005

**ಅನುವಾದಗಳು:**

**ಕನ್ನಡದಿಂದ ಇಂಗ್ಲಿಷ್‌ಗೆ:**

1. 20th Century Kannada Poetry – 1983
2. Poems of G.S. Shivarudrappa – 1985
3. The Buddha Smile
4. Poems of K.S. Narasimha Swamy (with P. Srinivasa Rao) – 1993
5. Veerappa Moily's novel `On to the Great Beyond' – 2003
6. Selected Poems of M. Gopalakrishna Adiga – 2005

**ಇಂಗ್ಲಿಷ್‌ನಿಂದ ಕನ್ನಡಕ್ಕೆ:**

1. ಅಯನೆಸ್ಕೋನ The Bold Soprano – 1974
2. ರಸ್ಕಿನ್‌ನ Unto This Last – 1979
3. ಸ್ಟ್ರಿಂಡ್‌ಬರ್ಗ್‌ನ Miss Julie – 1979
4. ಸಿಂಧೀ ಸಾಹಿತ್ಯ ಚರಿತ್ರೆ – 1981
5. ಅರಿಸ್ಟೋಫೆನಿಸನ The Bird – 1990
6. ಸೃಷ್ಟಿಶೀಲ ಬದುಕಿಗಾಗಿ ಶಿಕ್ಷಣ Education for Creative Living – 2002

**ಬಂಗಾಳಿಯಿಂದ ಕನ್ನಡಕ್ಕೆ:**

1. ನೀರೇಂದ್ರನಾಥ ಚಕ್ರವರ್ತಿಯವರ 'ಉಲಂಗ್ ರಾಜಾ' – 1996
2. ರವೀಂದ್ರನಾಥ ಟಾಗೋರರ 'ತೀನ್ ಸಂಗಿ' – 1998
3. ಬಂಗಾಳಿ ಕವಿತೆಗಳು – 2002

**ಬಂಗಾಳಿಯಿಂದ ಇಂಗ್ಲಿಷ್‌ಗೆ:**

1. A House of Thousand Doors – 1992
(ಸುಬೋಧ್ ಸರ್ಕಾರ್ ಅವರ ಕವಿತೆಗಳು)

**ಸಂಪಾದಿಸಿದ ಕೃತಿಗಳು:**

1. ಎಸ್.ಎಲ್. ಭೈರಪ್ಪ ಅವರ ಕೃತಿಗಳ ವಿಮರ್ಶೆ – 2002
2. ಪಿ. ಶ್ರೀನಿವಾಸ್ ರಾವ್ ಅವರ ಸಮಗ್ರ ಸಾಹಿತ್ಯ – 2002
3. ಪಿ. ಶ್ರೀನಿವಾಸ್ ರಾವ್ ಅವರ Roots and Wings – 2007

**ಇತರೆ:**

1. ಓದು ಬರಹದ ಗುಟ್ಟು – 2001
2. ಇನ್ನಷ್ಟು ತಮಾಷೆ ಪದ್ಯಗಳು – 2000
3. ಭಾವಗೀತೆಗಳು – 2003

**ಅನ್ಯಭಾಷೆಗಳಲ್ಲಿ ನಾಡಿಗರ ಕೃತಿಗಳು:**

**ದಾಂಪತ್ಯಗೀತೆ**

1. ತಮಿಳು: ಎರ್ರೈ ಅಡಿಯನ್ – 1999
2. ಇಂಗ್ಲಿಷ್: ಕವಿಯ ಅನುವಾದ – 2000
3. ಬಂಗಾಳಿ:
ಸುಭೋದ್ ಸರ್ಕಾರ್ ಮತ್ತು ಮಲ್ಲಿಕಾ ಸೇನ್‌ಗುಪ್ತ – 2000
4. ಪಂಜಾಬಿ: ಗುಲವಂತ್ ಫಾರಿಗ್ – 2000
5. ಮರಾಠಿ: ಕೇಶವ ಮೇಶ್ರಾಮ್ – 2004
6. ಹಿಂದಿ: ಗಂಗಾಪ್ರಸಾದ್ ವಿಮಲ್ – 2004
7. ಕೊಂಕಣಿ: ಮನೋಹರ ರಾಯ್ ಸರ್‌ದೇಸಾಯಿ – 2007

(ಮಲೆಯಾಳಿ, ಉಡಿಯಾ, ಅಸ್ಸಾಮಿ, ತೆಲುಗು, ಉರ್ದು ಅನುವಾದಗಳು ಸಿದ್ಧವಾಗಿವೆ. ಇನ್ನೂ ಪ್ರಕಟವಾಗಿಲ್ಲ.)

**ನಾಡಿಗರನ್ನು ಕುರಿತು:**

ಡಾ. ಜಿ.ಬಿ. ಹರೀಶ್ ಅವರು ನಾಡಿಗರ **'ಪಂಚಭೂತಗಳು'** ಕಾವ್ಯದ ಮೇಲೆ ಒಂದು ಪ್ರೌಢ ವಿಮರ್ಶಾಗ್ರಂಥವನ್ನು ಬರೆದಿದ್ದಾರೆ. ■

ವಿಶೇಷ ಲೇಖನ

# ಕನ್ನಡ ಸಾಹಿತ್ಯ ರತ್ನತ್ರಯರಲ್ಲಿ ಒಬ್ಬರು: ಅಡಿಗರು

✍... ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ



ಶ್ರೇಷ್ಠ ಲೇಖಕ ಒಂದು ನಾಡಿನ ಅಮೂಲ್ಯ ಸಂಪತ್ತು. ಒಮ್ಮೆ ಕಾರ್ಲೈಲ್ ಹೇಳಿದಸಂತೆ "ನಿಮಗೆ ಷೇಕ್ಸ್‌ಪಿಯರ್ ಬೇಕೋ ಅಥವಾ ಭಾರತದ ಮೇಲಿನ ಆಂಗ್ಲ ಸಾಮ್ರಾಜ್ಯ ಬೇಕೋ ಎಂದು ಎರಡಲ್ಲಿ ಒಂದು ಆಯ್ಕೆಗೆ ಹಾಕಿದ್ದಾದರೆ ನನ್ನ ಆಯ್ಕೆ ಷೇಕ್ಸ್‌ಪಿಯರ್ ಪರ" ಅಂತ. ಶ್ರೇಷ್ಠ ಲೇಖಕನೊಬ್ಬನ ಘನತೆ ಹೇಗೆ ಒಂದು ಸಾಮ್ರಾಜ್ಯವನ್ನೂ ಮೀರಿದ ಅಲೌಕಿಕ ನಿಧಿ ಎನ್ನುವುದು ಕಾರ್ಲೈಲ್‌ನ ಮಾತಿನ ಹಿಂದಿರುವ ಅಭಿಪ್ರಾಯ.

ಕನ್ನಡ ಕಾವ್ಯದಲ್ಲಿ ಬಹಳ ಶ್ರೇಷ್ಠರ ಎಣಿಕೆಯೊಳಗೆ ಬರುವ ಕವಿಗಳಲ್ಲಿ ಗೋಪಾಲಕೃಷ್ಣ ಅಡಿಗರೂ ಒಬ್ಬರು. ನಮ್ಮ ಒಂದು ಸಹಸ್ರ ವರ್ಷಗಳ ಸಾಹಿತ್ಯದಲ್ಲಿ ಆಗಿಹೋದ ಅನನ್ಯ ವರ್ಚಸ್ಸಿನ ಮೇಜರ್ ಲೇಖಕರೆಂದರೆ ಪಂಪ, ಹರಿಹರ, ಬಸವಣ್ಣ, ಕುಮಾರವ್ಯಾಸ, ಬೇಂದ್ರೆ, ಕುವೆಂಪು, ಅಡಿಗ ಎಂದು ನನ್ನ ಎಣಿಕೆ. ಇವರಿಗೆ ಸ್ವಲ್ಪವೇ ಕೆಳನೆಲೆಯಲ್ಲಿರುವ ಇತರ ಘನ ಲೇಖಕರೂ ಕೆಲವರಿದ್ದಾರೆ. ಆದರೆ ಕನ್ನಡ ಕಾವ್ಯ ಪರಂಪರೆಯ ನಕ್ಷೆಯ ಪ್ರಧಾನ ಕೊಂಡಿಗಳೆಂದರೆ ಮೇಲೆ ಹೇಳಿದವರು; ಕನ್ನಡ ಕಾವ್ಯ ಪ್ರಪಂಚದ ಸಪ್ತರ್ಷಿಗಳು.

ಹತ್ತನೆಯ ಶತಮಾನವನ್ನು ಕನ್ನಡ ಸಾಹಿತ್ಯದ ಸುವರ್ಣಯುಗ ಅಂತ ಹಿಂದೆ

ವಿದ್ವಾಂಸರು ಎಣಿಸಿದ್ದುಂಟು. ಅದು ಸರಿಯಲ್ಲ. ಇಪ್ಪತ್ತನೆಯ ಶತಮಾನಕ್ಕೆ ಆ ಹೆಸರು ಹೇಳಬೇಕು. ಈ ಶತಮಾನದಲ್ಲಿ ಕನ್ನಡದಲ್ಲಿ ಭಾರಿ ಸುಗ್ಗಿಯೇ ಬಂದು ಕಾವ್ಯದ ಜೊತೆಗೆ ನಾಟಕ, ಕಾದಂಬರಿ, ಸಣ್ಣಕಥೆ ಮೊದಲಾದ ಹೊಸ ಸಾಹಿತ್ಯ ಪ್ರಕಾರಗಳೂ ಸೃಷ್ಟಿಯಾಗಿ ಎಲ್ಲ ಪ್ರಕಾರಗಳಲ್ಲೂ ಶ್ರೇಷ್ಠ ಲೇಖಕರು ಹಿಂದೆಂದಿಗಿಂತ ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿಕೊಂಡರು. ಅಪೂರ್ವ ಕಾಂತಿಯ ಸಾಹಿತ್ಯ ಸೃಷ್ಟಿಯಾಯಿತು.

ಕಳೆದ ಶತಮಾನದ ಸಾಹಿತ್ಯದಲ್ಲಿ ಕಾವ್ಯ ರತ್ನತ್ರಯರು ಅಥವಾ ಕಾವ್ಯ ತ್ರಿಮೂರ್ತಿಗಳು ಅಂತ ಕರೆಯಬಹುದಾದವರು ಈ ಮೂವರು: ಬೇಂದ್ರೆ, ಕುವೆಂಪು, ಅಡಿಗ.

ನವೋದಯ ಕಾವ್ಯದ ಎಲ್ಲ ಪ್ರಮುಖ ಅಂಶಗಳೂ ಅತ್ಯಂತ ಕಾವ್ಯಮಯವಾಗಿ, ವೈವಿಧ್ಯಪೂರ್ಣವಾಗಿ, ಶಕ್ತಿಯುತವಾಗಿ ಕಾಣಿಸಿಕೊಂಡದ್ದು ಬೇಂದ್ರೆಯವರಲ್ಲಿ. ಭಾವಗೀತಾತ್ಮಕತೆ ಅವರಲ್ಲಿ ಕಾಣಿಸಿಕೊಂಡ ರೀತಿ ಅದ್ವಿತೀಯ. ಕಾವ್ಯದ ಮೂಲಕ ಸತ್ವಭರಿತವಾದ ಅನೇಕ ವಿಚಾರಗಳನ್ನು ಮೂಡಿಸಿಕೊಟ್ಟು ನಮ್ಮ ವೈಚಾರಿಕತೆಯನ್ನು ಬೆಳೆಸಲು ಯತ್ನಿಸಿದವರು ಕುವೆಂಪು. ಸಾಹಿತ್ಯ ಕ್ಷೇತ್ರದ ಎಲ್ಲ ಪ್ರಕಾರಗಳಲ್ಲೂ ಕೃಷಿ ಮಾಡಿದ ಮೇಲ್ಮೆ ಅವರದು. ಅನಂತರ ಬಂದ ಅಡಿಗರು ಕನ್ನಡದಲ್ಲಿ ಒಂದು ಹೊಸ ಕಾವ್ಯ ಚಳುವಳಿಯನ್ನೇ ಹುಟ್ಟುಹಾಕಿ, ಬೆಳೆಸಿ, ಅನೇಕ ಶ್ರೇಷ್ಠತಮ ಕವಿತೆಗಳನ್ನು ರಚಿಸಿ, ತಮ್ಮ ಮುಂದಿನ ಪೀಳಿಗೆಗೆ ಹೊಸ ಸೃಷ್ಟಿಯ ಅವಕಾಶವನ್ನು ಕಲ್ಪಿಸಿಕೊಟ್ಟವರು. ನಮ್ಮ ಭಾವನಾ ಪ್ರಪಂಚದ ಸಂಕೀರ್ಣತೆ, ಭಾಷೆಯ ಅರ್ಥಕಾರಕ ಶಕ್ತಿಗಳನ್ನು ಬೆಳೆಸಿದವರು. ಅಡಿಗರ ಮೊದಲ ಮೂರು ಸಂಕಲನ ಅವರು ನವ್ಯ ಕಾವ್ಯವನ್ನು ಸೃಷ್ಟಿಸುವ ಮುಂಚೆ ಬಂದವು, ತಮ್ಮ ನಿಜದ ಎತ್ತರಕ್ಕೆ ಹತ್ತಲು ತುಳಿದ 3 ಮೆಟ್ಟಿಲುಗಳು. ಆಗ ಚಾಲನೆಯಲ್ಲಿದ್ದ ಕಾವ್ಯದ ಆಶಯ, ಅಭಿವ್ಯಕ್ತಿ ರೀತಿಗಳನ್ನು ಗರ್ಭೀಕರಿಸಿಕೊಂಡ ಕಾವ್ಯ ಪ್ರಯತ್ನಗಳು. ಮೊದಲನೆಯದಾದ 'ಭಾವತರಂಗ' ಸಂಕಲನ ರೊಮ್ಯಾಂಟಿಕ್ ಕಾವ್ಯಮಾರ್ಗದ್ದಾದರೆ ಎರಡನೆಯದು ಪ್ರಗತಿಶೀಲ ಸಾಹಿತ್ಯದ ಪ್ರಣಾಲಿಗಳಿಗೆ ಹತ್ತಿರವಾದವು. ಮೂರನೆಯ ಸಂಕಲನ 'ನಡೆದುಬಂದ ದಾರಿ'ಯಲ್ಲಿ ಹೊಸ ಮಾರ್ಗವೊಂದಕ್ಕೆ ಕವಿ ಹೊರಳುವ ಸೂಚನೆಗಳಿವೆ. ಈ ಕೃತಿಗಳು ಹೊರಬಂದ ದಿನಗಳಲ್ಲಿ ಪ್ರಕಟಪಡಿಸಿದ ಅರ್ಥಪ್ರಪಂಚ ಕವಿಯ ಸಾಧನೆ ತುದಿ ಮುಟ್ಟಿದ ಮೇಲೆ, ಅವನ ಒಟ್ಟು ಕಾವ್ಯ ಶ್ರೇಣಿಯ ಒಂದು ಭಾಗವಾಗುತ್ತ, ಹೊಸ ಧ್ವನಿಗಳನ್ನು ಪಡೆದುಕೊಂಡಿವೆ. ಯಾವನೇ ಒಬ್ಬ ಹಿರಿಯ ಕವಿಯ ವಿಷಯದಲ್ಲಿಯೂ ಈ ಮಾತು ಸತ್ಯ. ಮಹತ್ವದ ಕವಿಯ ಆರಂಭವೂ ಮಹತ್ವದ್ದೇ ಆಗಿರುತ್ತದೆ. ಅಲ್ಲಿ ಮುಂಚೆ ಅಷ್ಟಾಗಿ ಗಮನಕ್ಕೆ ಬಾರದ ಹೊಳಹುಗಳಿರುತ್ತದೆ. ಅಡಿಗರ ಮೊದಲ ಕವನ **'ನನ್ನ ನುಡಿ'** ಇದಕ್ಕೆ ಸಾಕ್ಷಿ. ಸೋಪಜ್ಞತೆಯನ್ನು ಕುರಿತ ಅವರ ಉತ್ಕಟ

ಹಂಬಲ ಅಲ್ಲಿನ ಮೊದಲ ಕವಿತೆಯಲ್ಲೇ ಹೊರಗಿನ ದನಿಯಾಗಿ ಹೊಮ್ಮಿದೆ. ಅಡಿಗರ ಸಾಧನೆಯ ತುದಿಗೆ ನಿಂತು ಹಿಂದಕ್ಕೆ ದೃಷ್ಟಿ ಹಾಯಿಸಿದಾಗ ಈ ಕವನ ತನ್ನ ಮೊದಲಿನ ಸರಳತೆ ಕಳಚಿ ತುಂಬ ನಿಗೂಢವಾಗಿ ಕಾಣತೊಡಗುತ್ತದೆ.

ಆ ಕವನದಲ್ಲಿ ಕವಿ ಹೇಳುತ್ತಾನೆ:

1. ಈ ಮಂದಾನಿಲ ಇದೆಯಲ್ಲ. ಇದು ನೂರಾರು ಹೂಗಳ ಪರಿಮಳ ತರುತ್ತದೆ. ಆದರೆ ತನ್ನದೇ ಸ್ವಂತ ಪರಿಮಳ ಇಲ್ಲ.
2. ಈ ಕೊಳದ ಎದೆಯಲ್ಲಿ ಸಾವಿರಾರು ಉಜ್ವಲ ನಕ್ಷತ್ರಗಳ ಪ್ರತಿಬಿಂಬ ಕಾಣುತ್ತೆ. ಆದರೆ ಅದಕ್ಕೆ ತನ್ನದೇ ಆದ ಒಂದು ಬೆಳಕು ಇಲ್ಲ.
3. ಸಂಧ್ಯಾಮೇಘ ಸೂರ್ಯನ ಕಾಂತಿಯಿಂದ ಬೆಳಗುತ್ತೆ. ಅದಕ್ಕೆ ಸ್ವಂತ ಬೆಳಕಿಲ್ಲ.
4. ಈ ಭೂಮಿ ಹಗಲು ಸೂರ್ಯನ ಬೆಳಕಿನಲ್ಲಿ, ರಾತ್ರಿ ಚಂದ್ರನ ಬೆಳಕಿನಲ್ಲಿ ಬೆಳಗುತ್ತಾಳೆ. ಆದರೆ ಅವಳು ಸ್ವಯಂಪ್ರಭೆಯಲ್ಲ.
5. ನನ್ನ ಪಾಡು ತಾನೇ ಏನು? ಅನ್ಯಾಶ್ರಯಿಯಾದ ಬಾಳು. ನಾನು ಏನು ಬರೆದರೂ ಅದರಲ್ಲಿ ಬೇರೆಯವರ ಬರಹದ ಭಾವನೆ, ವಿಚಾರಗಳ ನೆರಳು ಕಾಣುತ್ತೆ.

ಕವಿಯ ಈ ದುಃಖದ ಮಡಿಲಲ್ಲೇ ಅವನ ಅಗಾಧ ಶಕ್ತಿ ಬಚ್ಚಿಟ್ಟುಕೊಂಡಿರುವುದನ್ನು ಹೇಳುವ ಆಶ್ಚರ್ಯಕರ ರೂಪಕ ಅಲ್ಲಿದೆ. ಜಗತ್ತಿಗೇ ರೂಪ ನೀಡಿರುವ ಪಂಚಭೂತಗಳು ಸ್ವಂತಿಕೆ ಇಲ್ಲದೆ ದೀನವಾಗಿ ತೋರುವ ಉಪಮಾವಳಿಯೊಂದನ್ನು ಕೊಟ್ಟ ಕವಿ, ಅವುಗಳ ಸ್ಥಿತಿಯೇ ತನ್ನದೂ ಕೂಡ ಎನ್ನುತ್ತಾನೆ. ಸೃಷ್ಟಿಕಾರಕವಾದ ಮಹಾಶಕ್ತಿಗಳ ಜೊತೆ ತನ್ನನ್ನು ಸಮೀಕರಿಸಿಕೊಂಡು ಕವಿ ತೋಡಿಕೊಳ್ಳುವ ಈ ಹಳಹಳಿಕೆಯೆಲ್ಲ ತನ್ನ ಅಗಾಧ ಶಕ್ತಿಯ ಅರಿವು ತನಗೇ ತಿಳಿಯದೆ ಆಡುತ್ತಿರುವ ಮಾತಾಗಿದೆ. ಪಾರ್ಥನನ್ನೇ ಒಡಲಲ್ಲಿಟ್ಟುಕೊಂಡು ದೈನ್ಯದಲ್ಲಿರುವ ಬೃಹನ್ನಳೆಯ ಕೊರಗಿನಂತಿದೆ. ಇಡೀ ಕವಿತೆ ವಿಷಾದದ ಉರಿಯಿಂದ ಜ್ವಲಿಸುತ್ತಿದೆ, ನಿಜ. ಆದರೆ ಅದು ಅಶಕ್ತನೊಬ್ಬನ ಅಸಹಾಯಕ ಚೀರಾಟವಲ್ಲ, ಮುಂದೆ ಮಹಾಕವಿಯಾಗಿ ಬೆಳೆಯಲಿರುವ ಕಿಶೋರನ ಸೃಷ್ಟಿಕಾರಕ ವಿಷಾದ.

**(ಮುಂದುವರಿಯುವುದು)**

ಕವಿಯು ತನ್ನ ಕಾಲ-ದೇಶ-ಸನ್ನಿವೇಶಗಳ ವಾತಾವರಣದಿಂದ ಎಷ್ಟೆಷ್ಟು ಮೇಲಕ್ಕೆ ಹೋಗುತ್ತಾನೋ, ಅವನ ಮಹತ್ವ ಅಷ್ಟಷ್ಟು. ನಮಗೆ ಕವಿಯಿಂದ ಬೇಕಾಗಿರುವುದು ಸುತ್ತಮುತ್ತಣ ಪ್ರಪಂಚವಲ್ಲ. ಅದರಿಂದ ಬಿಡಿಸಿಕೊಂಡು ಮೇಲ್ಮಟ್ಟಕ್ಕೆ ಏರುವುದು ಹೇಗೆ ಎಂಬುದು ನಮಗಿರುವ ಪ್ರಶ್ನೆ.

**– ಡಿ.ವಿ.ಜಿ.**

## ನಗೆ ಬರಹ

# ನನಗೆ ಸಿಕ್ಕ ವರದಕ್ಷಿಣೆ

✍... ಸಿ.ಆರ್. ಸತ್ಯ

ನಾನು ಸ್ವಲ್ಪ ಹುಟ್ಟಿದಾರಭ್ಯ ಪೆದ್ದ. ಬೆಳೀತಾ ಬೆಳೀತಾ ಪೆದ್ದತನ ಜಾಸ್ತಿ ಆಯಿತು ಎಂದೇ ಹೇಳಬೇಕು. ಆದರೂ ದೇವರ ದಯೆಯಿಂದ ಒಂದು ಡಿಗ್ರಿಯನ್ನೂ ಪಡೆದೆ, ಕೆಲಸಾನೂ ಸಿಕ್ತು. ಎಲ್ಲಕ್ಕಿಂತ ಹೆಚ್ಚಾಗಿ ನನಗೆ ಹೆಣ್ಣು ಕೊಡೋದಿಕ್ಕೆ ಅಂತ ಒಂದು ಅತ್ತೆ-ಮಾವ ಜೋಡಿಯನ್ನೂ ದೇವರು ಪಾಲಿಸಿದ. ಮದುವೆ ಆಯ್ತು. ಒಂದು ಹೊರೆ ಮಕ್ಕಳೂ ಆದವು (ಎಷ್ಟು ಮಕ್ಕಳು ಅಂತ ಆಮೇಲೆ ಹೇಳ್ತೀನಿ, ಮರೆತುಹೋಗಿದೆ). ಸಂಸಾರ ಶಾಂತಿ ಪಥದಲ್ಲಿ ಯಾವ ತೊಂದರೆಯೂ ಇಲ್ಲದೆ ಹೋಗುತ್ತಾ ಇದೆ ಅನ್ನೋ ಭಾವನೆ ಅಂಕುರಿತ್ತು... ಇರಿ, ಇರಿ, ಹಾಗೇಂತ ಅಂದ್ಕೊಂಡೆ. ಅಷ್ಟರಲ್ಲೇ ಒಂದು ಸಿಡಿಲು ಬಡೀತು.

ಆ ಸಿಡಿಲು ನನ್ನ ಕ್ಲಾಸ್‌ಮೇಟ್ ದಂಡಪಾಣಿ. ಅವನು ನನಗಿಂತ ಪೆದ್ದ ಅಂತ ನನಗೆ ಜ್ಞಾಪಕ. ಆದರೂ ಅನೇಕ ವರ್ಷಗಳಾದ ಮೇಲೆ ಮೊನ್ನೆ ರಸ್ತೆಯಲ್ಲಿ ಸಿಕ್ಕಿದಾಗ "ಏನೋ ಪೆದ್ದುಮುಂಡೇದೆ. ಏನು ಮಾಡ್ಕೊಂಡು ಜೀವನ ಸವೆಸ್ತಿದೀಯಾ? ಅಂತ ನನಗೇ ಸವಾಲು ಹಾಕಿದ. ವಿಧಾನಸೌಧದಲ್ಲಿ ಸರ್ಕಾರವನ್ನು ಉದ್ಧಾರ ಮಾಡೋ ಚಾಕರಿ ಕೆಲಸದಲ್ಲಿದ್ದೀನಿ ಎಂದೆ. "ಸ್ವಂತ ಮನೆ?" ಅಂತ ಕೇಳಿದ, "ಇಲ್ಲ" ಅಂದೆ. "ಕಾರಿದೆಯೆ?" ಇದು ಅವನ ಮರು ಪ್ರಶ್ನೆ. "ಬಾಯ್ಮುಚ್ಚು!" ಅಂದೆ. "ಎಷ್ಟು ಲಕ್ಷ ರೂಪಾಯಿಗಳನ್ನು ಪೇರಿಸಿಟ್ಟಿದ್ದಿ?" ಅಂತ ಕೇಳಿದ. ನನಗೇನು ಅಂತಹ ಮಾವ ಸಿಕ್ಕಿಲ್ಲ ಅಂತ ಗಡುಸಾಗಿಯೇ ಹೇಳಿದೆ. "ಅದಕ್ಕೆ ನಿನ್ನನ್ನ ಪೆದ್ದ ಅಂತ ನಾವೆಲ್ಲಾ ನಿನಗೆ ಕಾಲೇಜಿನಲ್ಲೇ ನಾಮಕರಣ ಮಾಡಿದ್ದು. ನನ್ನನ್ನು ನೋಡು. ರಾಜ ವೈಭವ ಕಣೋ! ಮನೆ, ಕಾರು, ಫಾರಿನ್ನು ಇತ್ಯಾದಿ ಇತ್ಯಾದಿ. ಎಲ್ಲಾ ಗಿಟ್ಟಿಸಿದ್ದು ವರದಕ್ಷಿಣೆಯಿಂದಲೇ! ಮದುವೆಗೆ ಮುಂಚೇನೇ. ಈಗ ನನಗಿರೋದು ಒಂದೇ ಕೆಲಸ. ಮಾವನ ದುಡ್ಡನ್ನು ಹೇಗೆ ಕರಗಿಸೋದು ಅಂತ ಯೋಜನೆಗಳನ್ನು ಮಾಡೋದು!" ಅಂತ ಕಿಲಿಕಿಲಿ ನಕ್ಕಿದ.

ಅವನನ್ನು ಸಾಗು ಹಾಕಿ ಮನೆಗೆ ಬಂದೆ. ಯೋಚನೆ ಮಾಡಿದೆ. ನಮ್ಮ ಜಾತಿಯಲ್ಲಿ ವರದಕ್ಷಿಣೆ ಪದವೇ ಇಲ್ಲ; ಆದರೂ ಏನಂತೆ? ಈಗ ಯಾತಕ್ಕೆ ನನ್ನ ಮಾವನ್ನ ವರದಕ್ಷಿಣೆ ಕೇಳಬಾರದು? ಅವರ ಮಗಳನ್ನು ನಾನು ಮದುವೆಯಾಗಿ ಅವರ ಜೀವನಕ್ಕೆ ನಾನು ನೆಮ್ಮದಿಯನ್ನು ಕೊಟ್ಟಿಲ್ಲವೆ? ನಿರ್ಧಾರಕ್ಕೆ ಬಂದೆ.

ಹೆಂಡ್ತಿ ಎಲ್ಲೋ ಹೋಗಿದ್ದವಳು ಮನೆಗೆ ಬಂದಳು. ಹಿಂದೆ ಒಂದು ಹೊರೆ ಮಕ್ಕಳು (ನನ್ನದೇ!) ಬಾಲಂಗೋಚಿಗಳ ತರಹ. "ನಡಿಯೇ, ನಿಮ್ಮಪ್ಪನ ಮನೆಗೆ ಹೋಗೋಣ" ಅಂತ ಅಂದೆ. "ಯಾಕೆ?" ಅಂತ ಕೇಳಿದಳು. "ಅವರನ್ನ ರೆಟ್ರೋಸ್ಪೆಕ್ಟಿವ್ ಆಗಿ ವರದಕ್ಷಿಣೆ ಡಿಮ್ಯಾಂಡ್ ಮಾಡೋಕ್ಕೆ" ಅಂತ ಅಂದೆ. "ಎಷ್ಟು ಲಕ್ಷ ರೂಪಾಯಿಗಳನ್ನು ಕೇಳ್ತೀರಾ?" ಅಂತ ನನ್ನ ಹೆಂಡ್ತಿ ಕೇಳಿದಳು – ಸ್ವಲ್ಪನೂ ಗಾಬರಿಯಾಗದೆ. "ಹೆಚ್ಚು ಕಮ್ಮಿ ಐದು ಲಕ್ಷ" ಅಂದೆ. "ಹಾಗಾದ್ರೆ ಅವರಿಗೆ ಮುಂಚಿತವಾಗಿಯೇ ಫೋನ್ ಮಾಡಿ ಹೋಗೋಣಾ ರೀ. ಬ್ಯಾಂಕ್‌ಗೆ ಹೋಗಿ ನಿಮಗೆ ಕ್ಯಾಶ್ ರೆಡಿಮಾಡೋಕ್ಕೆ ಅಪ್ಪನಿಗೆ ಟೈಮ್ ಸಿಗುತ್ತೆ" ಅಂತ ಸಲಹೆ ಕೊಟ್ಟಳು. "ನೀನೇ ಫೋನ್ ಮಾಡು" ಅಂತ ಹುಕುಂ ಮಾಡಿದೆ. ಫೋನ್‌ನಲ್ಲಿ ಸುಮಾರು ಹದಿನೈದು ನಿಮಿಷಗಳ ಕಾಲ ಏನೇನೋ ಮಾತಾಡ್ತಿದ್ದಳು. ಆಮೇಲೆ ಫೋನ್ ಇಟ್ಟು "ಆಯ್ತು ರೀ, ಹನ್ನೆರಡು ಘಂಟೆಗೆ ಬನ್ನಿ ಅಂತ ಅಪ್ಪ ಹೇಳಿದ್ರು, ಹಾಗೇ ಅಲ್ಲೇ ಊಟ ಮಾಡ್ಕೊಂಡೇ ಹೋಗಿ ಅಂತ ಅಮ್ಮಾನೂ ಹೇಳಿದ್ದಾರೆ" ಅಂತ ಅಂದಳು. ಇಂತಹ ಅತ್ತೆ, ಮಾವ, ಹೆಂಡತಿ ಸಿಕ್ಕಿದ್ದಕ್ಕೆ ನಾನು ಧನ್ಯ ಅಂದುಕೊಂಡೆ. ಸ್ವಲ್ಪ ಹೊತ್ತಾದ ಮೇಲೆ ನನ್ನ ಮಾವನಿಂದ ಟೆಲಿಫೋನ್ ಬಂತು. ನನ್ನ ಹೆಂಡ್ತಿ ಮಾತಾಡಿ, "ಅವರ ಮನೆಗೆ ಹೋಗೋವಾಗ ನೀವು ಇಲ್ಲಿಂದ ಒಂದು ಕಿಟ್‌ಬ್ಯಾಗ್ ಹಿಡಿದುಕೊಂಡು ಹೋಗಬೇಕಂತೆ. ಇಲ್ಲದಿದ್ದರೆ ಅಷ್ಟೊಂದು ಕ್ಯಾಶ್‌ನ ನಿಭಾಯಿಸೋದು ಕಷ್ಟ" ಅಂತ ಹೇಳಿದಳು.

ಸರಿ, ಊಟದ ಸಮಯಕ್ಕೆ ಕಿಟ್‌ಬ್ಯಾಗ್, ಹೆಂಡತಿ (1 no. each) ಮತ್ತು ಮಕ್ಕಳನ್ನ (ಎಷ್ಟು ಅಂತ ಕೇಳಬೇಡಿ) ಕರ್‍ಕೊಂಡು ಮಾವನ ಮನೆ ಸೇರಿದೆ. ಬಾಗಿಲಲ್ಲೇ ಅತ್ತೆ ಮಾವ ನಮ್ಮನ್ನು ಸ್ವಾಗತಿಸಿದರು. ಅತ್ತೆಮ್ಮನಂತೂ ಒಳಗಿನಿಂದ ಒಂದು ಆರತಿ ತಟ್ಟೆ ಬೇರೆ ತಂದು ನನಗೆ ಆರತೀನೂ ಮಾಡಿದ್ರು, "ಯಾಕತ್ತೆ ಇದೆಲ್ಲಾ...?" ಅಂತ ಸಂಕೋಚದಿಂದಲೇ ಕೇಳಿದೆ. "ಪಾಪ ನಿಮಗೆ ಮದುವೆ ಸಮಯದಲ್ಲೇ ಆರತಿ, ವರದಕ್ಷಿಣೆಯೆಲ್ಲಾ ಆಗಬೇಕಿತ್ತು. ಆಗಂತೂ ಆಗಲಿಲ್ಲ. ಈಗಲಾದರೂ ಆಗಲಿ" ಅಂತ ವಿವರಣೆ ಕೊಟ್ಟರು. ನನ್ನ ಹೆಂಡತೀನೇ ಆರತಿ ಹಾಡು ಹಾಡಿದಳು. "ಅಳಿಯಂದಿರು ಒಳಗೆ ದಯಮಾಡಬೇಕು" ಅಂತ ಮಾವ ಆದರದಿಂದ ಒಳಗೆ ಕರೆದರು. ಎಲ್ಲರಿಗೂ ಪಾನಕ ಇತ್ಯಾದಿಗಳು ಸರಬರಾಜು ಆದವು.

ಅಷ್ಟರಲ್ಲಿ ಅಕ್ಕಪಕ್ಕದ ಮನೆಗಳಿಂದ ಅಂತ ಕಾಣುತ್ತೆ, ಹತ್ತು ಹನ್ನೆರಡು ಜನ ಗಂಡಸರು, ಹೆಂಗಸರು, ಮಕ್ಕಳು–ಮನೆಯೊಳಗೆ ಬಂದು ನಿಂತರು. "ಇವರೆಲ್ಲಾ ಯಾರು... ಯಾಕೆ?... ಮಾವನವರೇ?" ಅಂತ ಕೇಳಿದೆ. "ಅಯ್ಯೋ, ನಾನೇ ಅವರೆಲ್ಲರನ್ನೂ ಬನ್ನಿ ಅಂತ ಕರೆದಿದ್ದೀನಿ ಅಳಿಯಂದಿರೇ? ನೀವೂ ಅವರನ್ನ ನೋಡಿದ ಹಾಗಾಗುತ್ತೆ. ಅವರೂ ನಿಮ್ಮನ್ನು ನೋಡಿದ ಹಾಗಾಗುತ್ತೆ" ಅಂತ

ಮಾವನವರು ನಕ್ಕಿದರು.

ಅಷ್ಟರಲ್ಲಿ ನನ್ನ ಹೆಂಡ್ತಿ "ವರದಕ್ಷಿಣೆ ಎಲ್ಲಿ ಕೊಡ್ತಿಯಪ್ಪಾ?" ಅಂತ ಅಪ್ಪನ್ನ ಜ್ಞಾಪಿಸಿದಳು. "ಅಯ್ಯೋ, ಅದಕ್ಕಲ್ಲವೇ ಅವರು ಬಂದಿರೋದು. ಅಳಿಯಂದಿರೇ, ನೀವು ಸ್ವಲ್ಪ ನನ್ನ ಜೊತೆಗೆ ಮನೆಯ ಹಿತ್ತಲಿಗೆ ಬನ್ನಿ. ಅಲ್ಲಿ ಕೊಡ್ತೀನಿ. ಇಲ್ಲಿ ಇಷ್ಟು ಜನರ ಎದುರಿಗೆ ಕೊಡೋದು ಚೆನ್ನಾಗಿ ತೋರೋದಿಲ್ಲ" ಅಂತ ಮಾವ ಹೇಳಿದ್ರು. "ಅದಕ್ಕೇನಂತೆ, ಬನ್ನಿ" ಅಂತ ಅವರೊಡನೆ ನಾನು ಹಿತ್ತಲಿಗೆ ಹೊರಟೆ.

ಹಿತ್ತಲಿನಲ್ಲಿ ಮಾವನವರು ಒಂದು ಹಸು ಕೊಠಡಿ ಕಟ್ಟಿಸಿದ್ದಾರೆ. ನೇರವಾಗಿ ಅಲ್ಲಿಗೆ ಕರೆದುಕೊಂಡು ಹೋದರು. ನನ್ನ ಹೆಂಡತಿಯೇ ಮುಂದೆ ಹೋಗಿ ಕೊಠಡಿ ಒಳಗೆ ದೂಕಿ ಧಭ್ ಅಂತ ಬಾಗಿಲು ಹಾಕಿ, ಹೊರಗಿನಿಂದ ಚಿಲಕ ಎಳೆದರು. "ಬೀಗ ಹಾಕ್ಬುಟ್ರೆ ವಾಸಿ ರೀ" ಅಂತ ನಮ್ಮ ಅತ್ತೆ ಹೇಳಿದ್ದು ಹೊರಗಿನಿಂದ ಕೇಳಿಸ್ತು. ನನ್ನ ಮಕ್ಕಳೆಲ್ಲಾ "ಅಪ್ಪ ಜೈಲು! ಅಪ್ಪ ಜೈಲು!" ಅಂತ ಕೇಕೆ ಹಾಕಿ ಕುಣಿಯೋದು ಕೇಳಿಸ್ತು. ನನ್ನ ಹೆಂಡತಿ "ಸರಿಯಾಗಿ ನೋಟುಗಳನ್ನ ಎಣಿಸಿಕೊಳ್ರೀ. ಪಾಪ ಒಳಗೆ ಕತ್ತಲೆ ಅಂತ ಕಾಣುತ್ತೆ" ಅಂತ ಕೂಗಿದಳು. ಈ ಸಮಯಕ್ಕೆ ನನ್ನ ಮುಂದೆ ಎರಡು ರಾಕ್ಷಸಾಕಾರಗಳು ಕಾಣಿಸಿದ್ವು, ಅರ್ಥವಾಯ್ತು. ಮಾವನವರ ಹಸುಗಳು. ಅಕ್ಕತಂಗಿಯರಂತೆ. ಸರಿಯಾಗಿ ಜ್ಞಾಪಕ ಬರ್ತಿಲ್ಲ. ಮೊದಲು ಅಕ್ಕ ನಾಲ್ಕು ಒದೆ ನನ್ನ ಹಿಂದಕ್ಕೆ ಕೊಟ್ಟಳು. ನಾನೇನೂ ಕಮ್ಮಿ ಇಲ್ಲ ಅಂತ ತಂಗೀನೂ ಮಾಡಿದ್ಲು. ಬ್ಯಾಲೆನ್ಸು ತಪ್ಪಿ ಕೆಳಗೆ ಬಿದ್ದೆ. ನೆಲದ ಮೇಲೆ ಸಗಣಿ ಹಾಸಿಗೆ ಇದ್ದಿದ್ದರಿಂದ ಮೂಳೆಗಳು ಇನ್ನೂ ಮುರಿದಿರಲಿಲ್ಲ. ಹೊರಗಿನಿಂದ ಅತ್ತೆಮ್ಮನವರು "ವರದಕ್ಷಿಣೆ ಸಾಕೆ ಅಳಿಯಂದಿರೆ? ಇನ್ನೊಂದೆರಡು ಲಕ್ಷ ಕೊಡೋಣವೆ?" ಅಂತ ಪ್ರೀತಿಯಿಂದ ಕೇಳಿದ್ರು. ನಮ್ಮ ಮಕ್ಕಳು "ಇನ್ನು ಸ್ವಲ್ಪ ವರದಕ್ಷಿಣೆ ತಗೋಪ್ಪ. ಪಾಪ ತಾತ-ಅಜ್ಜಿ ಎಷ್ಟು ಒಳ್ಳೆಯವರು! ಕೇಳಿದ್ದೆಲ್ಲಾ ಕೊಡ್ತಾರೆ" ಅಂದವು. "ಇಷ್ಟೊಂದು ಕ್ಯಾಶ್ ಕೊಡೋ ಬದಲು ಒಂದು ನೋಟಿದ್ರೆ ಚೆನ್ನಾಗಿರೋದು ಅಪ್ಪ" ಅಂತ ನನ್ನ ಹೆಂಡತಿ ಹೇಳಿದ್ದೂ ಕೇಳಿಸ್ತು.

ಮತ್ತೊಮ್ಮೆ ಆ ಗೋಮಾತೆಯರು ನನಗೆ ಹತ್ತೋ ಹನ್ನೆರಡೋ ಒದೆಗಳನ್ನು ಕೊಟ್ಟು ನನ್ನ ಮೇಲೆ ತೃಪ್ತಿಯಿಂದ ಸಗಣಿ ಹಾಕಿದವು. ಪಾಶ್ಚಾತ್ಯರ ದೃಷ್ಟಿಯಲ್ಲಿ ಹಿಂದೂಗಳು ಹಸುಗಳನ್ನ ತಾಯಿ ಸಮಾನವಾಗಿ ಪೂಜಿಸ್ತಾರೆ ಅಂತ ಪ್ರತೀತಿ.

ಈಗ ಪೂಜೆ ಡೈರಕ್ಷನ್ ರಿವರ್ಸ್ ಆದ್ಹಾಗೆ ಇತ್ತು. ಎಷ್ಟೋ ಯುಗಗಳೇ ಕಳೀತು ಅಂತ ಅಂದ್ಕೊತಾ ಇದ್ದೆ. ತಕ್ಷಣ ಕೊಠಡಿ ಬಾಗಿಲು ತೆಗೀತು.

ಹೊರಗೆ ಓಡಿದೆ. ಮಾವನ ಗೆಸ್ಟ್‌ಗಳೆಲ್ಲಾ ಅಲ್ಲೇ ಜಮಾಯಿಸಿದ್ದರು. ಅತ್ತೆ ಮಾವ ಹೆಂಡತಿ ಮಕ್ಕಳೆಲ್ಲಾ ನಗ ನಗ್ತಾ ನನ್ನನ್ನು ಮತ್ತೊಮ್ಮೆ ಕೊಠಡಿಯಿಂದ ಹೊರಕ್ಕೆ

ಸ್ವಾಗತಿಸಿ, ಇನ್ನೊಂದು ಆರತಿ ಬೆಳಗಿದರು. ಎಲ್ಲರ ಮುಖಗಳಲ್ಲೂ ಸಂತೋಷ, ಉತ್ಸಾಹ ಅನ್ನೋದು ತುಂಬಿ ತುಳುಕುತ್ತಿತ್ತು.

ನನ್ನ ಹೆಂಡತಿ "ಬೇರೆ ಬಟ್ಟೆಗಳನ್ನು ತಂದಿದೇನಿ. ಸಗಣಿ ಬಟ್ಟೆಗಳನ್ನ ಬಿಚ್ಚಿ, ಆ ಕಿಟ್ ಬ್ಯಾಗ್‌ನಲ್ಲಿ ಇಟ್ಕೊಳ್ಳಿ. ಸ್ನಾನ ಮಾಡ್ಕೊಂಡು ಬನ್ನಿ" ಅಂತ ಅಂದಳು. ಹಾಗೇ ಮಾಡಿ ಫ್ರೆಷ್ ಆಗಿ ಬಂದು ನಿಂತೆ. "ನಡೀರಿ, ಮನೆಗೆ ಹೋಗೋಣ" ಅಂತ ಹೇಳಿದಳು.

"ಊಟ...?" ಅಂದೆ ನಾನು ವೀಕಾಗಿ.

"ನಮ್ಮದೆಲ್ಲಾ ಆಯ್ತು ರೀ. ಮಕ್ಕಳಿಗೆ ಹಸಿವಾಗಿತ್ತು. ನಾವು ಮುಗಿಸಿದ್ವಿ" ಅಂತ ವಿವರಿಸಿದಳು.

ಮಾವನವರು "ಹೋಗ್ಬಿಟ್ಟು ಬನ್ನಿ ಅಳಿಯಂದಿರೇ, ಕಿಟ್ ಬ್ಯಾಗ್ ಹುಷಾರ್! ಯಾರಾದರೂ ಕಳ್ಳ ಹೊಡೆದುಕೊಂಡು ಹೋದಾನು" ಅಂತ ವಿದಾಯ ಹೇಳಿದರು. ಅತ್ತೆಮ್ಮನವರು "ನಿಮಗೆ ಮುಂದಕ್ಕೆ ಯಾವಾಗ ವರದಕ್ಷಿಣೆ ಬೇಕು ಅನ್ನಿಸುತ್ತೋ ಆಗ ಸಂಕೋಚವಿಲ್ಲದೆ ಕೇಳಿ. ಓೀಗೇ ಕೊಡ್ತಾ ಇರ್ತೀವಿ" ಅಂತ ಸೇರಿಸಿದರು.....

ಈ ಮೇಲ್ಕಂಡ ಘಟನೆ ನಡೆದು ಎರಡು ವಾರಗಳ ಮೇಲೆ ಆಗಿದೆ. ಗೋಮಾತೆಯರು ಪೂಜೆ ಮಾಡಿದ ಭಾಗಗಳಲ್ಲಿ ಬ್ಯಾಂಡೇಜ್‌ಗಳು ಇನ್ನೂ ಹಾಗೇ ಇವೆ. ಕೋಪಾನೂ ಇನ್ನೂ ಹಾಗೇ ಇದೆ– ಅತ್ತೆ, ಮಾವ, ಹೆಂಡತಿ ಮೇಲಲ್ಲ, ಆ ದಂಡಪಾಣಿ ಮೇಲೆ. ಅವನೇನಾದರು ಇನ್ನೊಂದು ಬಾರಿ ಸಿಕ್ಕಿ ನನ್ನನ್ನು ಪೆದ್ದ ಅಂದರೆ ಕೋಪ ನುಂಗಿಕೊಳ್ಳುತ್ತೀನಿ. ಯಾಕೇಂದ್ರೆ, ನಾನು ಮೊದಲೇ ಹೇಳಿದ ಹಾಗೆ, ಪೆದ್ದ. ಆದರೆ ಅವನೇನಾದರೂ ವರದಕ್ಷಿಣೆ ಅಂತ ಬಾಯಿ ಬಿಡಲಿ, ಅವನ ಕತೆ ಅಲ್ಲೇ ರೋಡಿನಲ್ಲೇ ಮುಗುಸ್ತೀನಿ... ■

**(ಶಿವರಾಮ ಕಾರಂತ ವೇದಿಕೆಯ ಇತ್ತೀಚೆಗಿನ ಪ್ರಕಟಣೆ: 'ಏಕಾದಶಿ ಉಪ್ವಾಸ'ದಿಂದ)**

ಮಾನವನ ಮನಸ್ಸಿನಲ್ಲಿರುವ ಉಜ್ವಲ ಗುಣಗಳಲ್ಲಿ ವಿವೇಕದಷ್ಟು ಪ್ರಯೋಜನಕಾರಿಯಾದುದು ಯಾವುದೂ ಇಲ್ಲ. ಉಳಿದ ಗುಣಗಳಿಗೆ, ಮೌಲ್ಯವನ್ನು ಕೊಡುವುದು ಮತ್ತು ಅವುಗಳು ನಿಯಮಿತ ಸ್ಥಾನಗಳಲ್ಲಿ ಸರಿಯಾಗಿ ಕಾರ್ಯವೆಸಗುವಂತೆ ಮಾಡುವುದು, ಆ ಮೂಲಕ ವ್ಯಕ್ತಿಗೆ ಶ್ರೇಯಸ್ಸನ್ನುಂಟು ಮಾಡುವುದು ಅದೇ.

**– ಎಡಿಸನ್**

## ವೇದಿಕೆಯ ಇತ್ತೀಚಿನ ಕಾರ್ಯಕ್ರಮಗಳು

# 'ಏಕಾದಶಿ ಉಪ್ವಾಸ' ಬಿಡುಗಡೆ

ದಿನಾಂಕ 14.6.2008ರಂದು ವೇದಿಕೆಯ ಆಶ್ರಯದಲ್ಲಿ ಶ್ರೀ ಸಿ.ಆರ್. ಸತ್ಯ ಅವರ ಹಾಸ್ಯ ಲೇಖನಗಳ ಸಂಕಲನ 'ಏಕಾದಶಿ ಉಪ್ವಾಸ'ವನ್ನು ಖ್ಯಾತ ಹಾಸ್ಯ ಲೇಖಕ 'ಅಪರಂಜಿ' ಪತ್ರಿಕೆಯ ಸಂಪಾದಕ ಶ್ರೀ ಶಿವಕುಮಾರ್ ಅವರು ಬಿಡುಗಡೆ ಮಾಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹೆಸರಾಂತ ಲೇಖಕ ಶ್ರೀ ಶ್ರೀನಿವಾಸ ವೈದ್ಯರು ಕೃತಿಯ ಕುರಿತು ಮಾತಾಡಿ ಅನೇಕ ಸ್ವಾರಸ್ಯಕರ ಹಾಸ್ಯ ಚಟಾಕಿಗಳನ್ನು ಸಿಡಿಸಿ ಶ್ರೋತೃಗಳನ್ನು ನಗಿಸಿದರು. ಲೇಖಕ ಶ್ರೀ ಸಿ.ಆರ್. ಸತ್ಯ ಅವರು ಕೃತಿಯ ಪ್ರೇರಣೆಯ ಕುರಿತು ಮಾತಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಮತಿ ರಾಧಾರಾಮಸ್ವಾಮಿ ವಹಿಸಿದ್ದರು. ಆರಂಭದಲ್ಲಿ ಶ್ರೀ ಬಿ.ವಿ. ಕೆದಿಲಾಯರು ಸ್ವಾಗತಿಸಿದರು. ಶ್ರೀ ಪಾ. ಚಂದ್ರಶೇಖರ ಚಡಗರು ಧನ್ಯವಾದವಿತ್ತರು.

# 'ಕಡಲ ತೀರದ ಭಾರ್ಗವ...' ಬಿಡುಗಡೆ

ಜುಲೈ 18ರಂದು ಆರ್.ಟಿ. ನಗರದ ಶಿವರಾಮ ಕಾರಂತ ವೇದಿಕೆಯ ಆಶ್ರಯದಲ್ಲಿ ತರಳಬಾಳು ಕೇಂದ್ರದಲ್ಲಿ ಶ್ರೀ ಪಾ. ಚಂದ್ರಶೇಖರ ಚಡಗರ ನಾಲ್ಕನೇ ಕವನ ಸಂಕಲನ 'ಕಡಲ ತೀರದ ಭಾರ್ಗವ ಮತ್ತಿತರ ಕವನಗಳು' ಪುಸ್ತಕದ ಬಿಡುಗಡೆ ಸಮಾರಂಭ ಏರ್ಪಡಿಸಲಾಗಿತ್ತು. ಖ್ಯಾತ ಕವಿ ಡಾ॥ ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ಕೃತಿ ಬಿಡುಗಡೆ ಮಾಡಿ, ಸಾಹಿತ್ಯದ ಪ್ರಯೋಜನದ ಬಗ್ಗೆ ಸ್ವಾರಸ್ಯಕರವಾಗಿ ಮಾತನಾಡಿದರು. ಶ್ರೀಮತಿ ಶಾಂತಾಕುಮಾರಿಯವರು ಕೃತಿ ಪರಿಚಯ ಮಾಡಿಕೊಡುತ್ತಾ ಸಮಾಜದ ಬಗೆಗಿನ ಚಡಗರ ಕಳಕಳಿ ಕಾರಂತರ ಆದರ್ಶಗಳನ್ನು ಮೈಗೂಡಿಸಿಕೊಂಡ ಅವರ ವ್ಯಕ್ತಿತ್ವವೇ ಕಾವ್ಯವಾಗಿ ಹೊಮ್ಮಿದೆ ಎಂದು ಹೇಳಿದರು. ಡಾ. ಆರ್. ಆರ್. ಪಾಂಗಾಳರು ಶುಭ ಹಾರೈಸಿದರು. ಸಂಸ್ಥೆಯ ಅಧ್ಯಕ್ಷೆ ಶ್ರೀಮತಿ ರಾಧಾರಾಮಸ್ವಾಮಿಯವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಶ್ರೀಮತಿ ನಳಿನಿ ಚಡಗರವರ ಪ್ರಾರ್ಥನೆಯೊಂದಿಗೆ ಶ್ರೀ ಶರತ್ ಕಾಳಿಂಗರಾವ್‌ರವರ ಭಾವಗೀತೆ ಸಮಾರಂಭಕ್ಕೆ ಮುದ ನೀಡಿತು. ಶ್ರೀ ಡಿ. ಎಚ್. ಎಮ್. ವೀರಶೇಖರ ಸ್ವಾಮಿ ಅಚ್ಚುಕಟ್ಟಾದ ನಿರೂಪಣೆ ಮಾಡಿ ಸಮಾರಂಭದ ಯಶಸ್ಸಿಗೆ ಕಾರಣರಾದರು.

ಆ ದಿನ ಶ್ರೀ ಮಂಟಪ ಪ್ರಭಾಕರ ಉಪಾಧ್ಯಾಯ ಮತ್ತು ತಂಡದವರಿಂದ ಏಕವ್ಯಕ್ತಿ ಯಕ್ಷಗಾನ ಪ್ರದರ್ಶನ ಏರ್ಪಡಿಸಿದ್ದು ಸಮಾರಂಭದ ವಿಶೇಷ ಆಕರ್ಷಣೆಯಾಗಿತ್ತು. ■



# ಶಿವರಾಮ ಕಾರಂತ ವೇದಿಕೆ (ರಿ.)

'ಆದರ್ಶ', ನಂ.307, 17ನೇ ಅಡ್ಡರಸ್ತೆ, 2ನೇ ವಿಭಾಗ,
ರವೀಂದ್ರನಾಥ ಟಾಗೋರ್ ನಗರ, ಬೆಂಗಳೂರು – 560 032
ದೂರವಾಣಿ: 23336822 / 23336087
ಇ–ಮೇಲ್: pcchadaga@hotmail.com

## ಕಾರ್ಯಕಾರಿ ಸಮಿತಿ

ಅಧ್ಯಕ್ಷರು : ಶ್ರೀಮತಿ ರಾಧಾ ರಾಮಸ್ವಾಮಿ

ಉಪಾಧ್ಯಕ್ಷರು : ಶ್ರೀ. ಎಸ್.ಆರ್. ವಿಜಯಶಂಕರ

ಕಾರ್ಯದರ್ಶಿ : ಶ್ರೀ. ಪಾ. ಚಂದ್ರಶೇಖರ ಚಡಗ

ಸಹಕಾರ್ಯದರ್ಶಿ : ಶ್ರೀಮತಿ ಶಾಂತಾಕುಮಾರಿ

ಖಜಾಂಚಿ : ಡಾ॥ ಆರ್.ಆರ್. ಪಾಂಗಾಳ

## ಸದಸ್ಯರು

ಸರ್ವಶ್ರೀ

1. ಬಿ.ವಿ. ಕೆದಿಲಾಯ
2. ಸಾ.ರಾ. ವಾರಂಬಳ್ಳಿ
3. ಬಿ. ಸದಾಶಿವರಾವ್
4. ಹೆಚ್.ವಿ. ಶಿವಸ್ವಾಮಿ
5. ಎ.ಆರ್. ರಾಮಯ್ಯ
6. ಬಿ.ಡಿ. ಶೆಣೈ
7. ಕೆ.ಎನ್. ಶ್ರೀಕಂಠಯ್ಯ
8. ಶ್ರೀಮತಿ ವನಜಾ ರಾಜನ್

ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ

ಗೌರವ ಸಂಪಾದಕರು : ಶ್ರೀ ಬಿ.ವಿ. ಕೆದಿಲಾಯ

Published by: P.C. CHADAGA, Secretary, Shivarama Karantha Vedike (R
`Adarsha, # 307, 17th Cross, 2nd Floor, R.T. Nagar, Bangalore-560 032
Ph: 2333 6822, Edited by: B.V. KEDILAYA
Design and printing solution: Sapthaswara Media Network, Bangalore - 04 Ph: 99865064